# ಶ್ರೀರಾಮಾಯಣ ದರ್ಶನಂ

# ಪಾತ್ರಗಳ ಕಥಾವಳಿ



ಡಾ.ಜಿ. ಕೃಷ್ಣಪ್ಪ

## ಡಾ॥ ಜಿ. ಕೃಷ್ಣಪ್ಪ

ಬೇಂದ್ರೆ ಕೃಷ್ಣಪ್ಪ ಎಂದೇ ಜನಪ್ರಿಯರಾಗಿರುವ ಡಾ. ಜಿ. ಕೃಷ್ಣಪ್ಪ ಅವರು ಸೃಜನಶೀಲ ಲೇಖಕರು, ಬೇಂದ್ರೆ ಸಾಹಿತ್ಯ ಪರಿಚಾರಕರು. ಬೇಂದ್ರೆ ಕಾವ್ಯದ ಓದಿಗೆ ಹೊಸ ಆಯಾಮ ಕೊಟ್ಟವರು.

ಬೆಂಗಳೂರು ಕೃಷ್ಣಪ್ಪನವರ ಹುಟ್ಟೂರು. 1948ರಲ್ಲಿ ಜನನ. ತಂದೆ ಹೆಚ್. ಗಂಗಯ್ಯ, ತಾಯಿ ಸಾವಿತ್ರಮ್ಮ. ಬೆಂಗಳೂರಿನ ಎಸ್.ಜೆ. ಪಾಲಿಟೆಕ್ನಿಕ್‌ನಲ್ಲಿ ಡಿಪ್ಲೋಮಾ. ವಾಹನ ನಿರೀಕ್ಷಕರಾಗಿ ವೃತ್ತಿಯಾರಂಭ, ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಯಾಗಿ ನಿವೃತ್ತಿ. ಉದ್ಯೋಗದ ನಡುವೆ ಬಿ.ಎ., ಎಲ್‌ಎಲ್‌ಬಿ., ಕನ್ನಡದಲ್ಲಿ ಸ್ನಾತಕೋತ್ತರ ಪದವಿ. 'ಬೇಂದ್ರೆ ಸಾಹಿತ್ಯದಲ್ಲಿ ಸ್ತ್ರೀ : ಒಂದು ಅಧ್ಯಯನ' ಕುರಿತು ಪಿಎಚ್‌ಡಿ. ಸಾಹಿತ್ಯದ ಓದು, ಬೇಂದ್ರೆ ಕಾವ್ಯದ ಗುಂಗೇ ಬರವಣಿಗೆಗೆ ಪ್ರೇರಣೆ. ಬೇಂದ್ರೆ ಅಭಿಮಾನಿ-ಧ್ಯಾನಿ. ಸತತ ಮೂರು ದಶಕಗಳಿಂದ ಶಾಲಾ-ಕಾಲೇಜುಗಳಲ್ಲಿ 650ಕ್ಕೂ ಅಧಿಕ ಬೇಂದ್ರೆ ಕಾವ್ಯಗಾಯನ ಸ್ಪರ್ಧೆ ಆಯೋಜನೆ, ಬಹುಮಾನವಾಗಿ ಬೇಂದ್ರೆ ಕೃತಿಗಳ ನೀಡಿಕೆ. ನಾಡಿನಾದ್ಯಂತ ಸಂಚಾರ, ಬೇಂದ್ರೆ ಕಾವ್ಯಾನುಭವವನ್ನು ಅಕ್ಷರಕ್ಕೆ ಅಕ್ಷರಶಃ ಇಳಿಸಿದ ಭಗೀರಥರು. ಬೇಂದ್ರೆ ಕಾವ್ಯ ಕೂಟ ಸ್ಥಾಪನೆ. ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಬೇಂದ್ರೆ ಕಾವ್ಯ ವಿಮರ್ಶೆ ಆಯೋಜಿಸಿ ಬಹುಮಾನ ವಿತರಣೆ. ಹಾಡುಹಕ್ಕಿ ಅಂಬಿಕಾತನಯದತ್ತ, ನಾಕುತಂತಿ-ಒಂದು ಟಿಪ್ಪಣಿ, ಬೇಂದ್ರೆ ಕಾವ್ಯ: ಪದನಿರುಕ್ತ, ಕುವೆಂಪು ಹನುಮದ್ದರ್ಶನ, ಸರಳ ಕನ್ನಡದಲ್ಲಿ ಲಕ್ಷ್ಮೀಶನ ವಚನ ಜೈಮಿನಿ ಭಾರತ, ರಾಘವಾಂಕನ ವಚನ ಹರಿಶ್ಚಂದ್ರ ಚಾರಿತ್ರ ಹಾಗೂ ಕನಕದಾಸರ ನಳದಮಯಂತಿ ಪ್ರೇಮಕಥೆಯ ರಚನೆ. ಬೇಂದ್ರೆಯವರ 'ಜಾತ್ರೆ' ನಾಟಕದ ನಿರ್ದೇಶನ, 'ಕುಣಿಯೋಣು ಬಾರಾ ಬೇಂದ್ರೆಯೊಡನೆ' ರೂಪಕ, ಕಂಸಾಳೆಯಲ್ಲಿ ಬೇಂದ್ರೆ ಕಾವ್ಯಪ್ರಯೋಗ ಕೃಷ್ಣಪ್ಪ ಅವರ ಮಹತ್ವದ ಕಾಣ್ಕೆಗಳು. ಸತತ ಸಾಹಿತ್ಯ ಸೇವೆಗೆ ಡಾ. ಜಿ.ಪಿ. ರಾಜರತ್ನಂ ಕನ್ನಡ ಸಾಹಿತ್ಯ ಪರಿಚಾರಕ ಪ್ರಶಸ್ತಿ, ಅಂಬಿಕಾತನಯದತ್ತ ರಾಷ್ಟ್ರೀಯ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸಾಹಿತ್ಯಶ್ರೀ ಪ್ರಶಸ್ತಿ, ಮತ್ತಿತರ ಗೌರವಗಳಿಗೆ ಪಾತ್ರರಾದ ಸಾಹಿತಿ.

## ಶ್ರೀರಾಮಾಯಣ ದರ್ಶನಂ

# ಪಾತ್ರಗಳ ಕಥಾವಳಿ

ಡಾ. ಜಿ. ಕೃಷ್ಣಪ್ಪ




ನೆಲಮಂಗಲ, ಬೆಂಗಳೂರು

Sri Ramayana Darshanam
# PATRAGALA KATHAVALI

**Dr. G. Krishnappa**
# 22, Sri Gurudatta Nilaya, 1st Cross,
Netaji Nagar, Mathikere, Bengaluru-560054
Cell : 9972109209

*Published by*
***Vamshi Publications,***
*# 4, Gayathri Complex, near T B Bus Stop, B H Road,*
*Subhash Nagar, Nelamangala, Bengaluru - 562 123*
*Mobil : 99165 95916, vamshipublications@gmail.com*



First Impression : 2021
Paper used: NS Maplitho 70 GSM Book Print
Book Size : 1/8th Dummy
Pages: xxiv+96=120
Price : Rs. 120/-
ISBN : 978-81-950533-2-2

ಪ್ರಥಮ ಮುದ್ರಣ : ೨೦೨೧

ಕಾಗದ : ಎನ್.ಎಸ್. ಮ್ಯಾಪ್ಲಿತೋ ೭೦ ಜಿಎಸ್‌ಎಮ್ ಬುಕ್‌ಪ್ರಿಂಟ್
ಪುಸ್ತಕದ ಆಕಾರ : ೧/೮ ಡಮ್ಮಿ
ಪುಟಗಳು: xxiv +96=120/–
ಬೆಲೆ : ೧೨೦/-

ಮುಖಪುಟ ವಿನ್ಯಾಸ : ಅಜಿತ್ ಕೌಂಡಿನ್ಯ
ಅಕ್ಷರ ಜೋಡಣೆ : ಶಿವಾನಂದ ಈ ಗಾಳಿ
ಅಭಿನವ ಕ್ರಿಯೇಷನ್ಸ್, ಮಾದಾವರ

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨

## ಅರ್ಪಣೆ

ನನಗೆ ತೆರೆದ ಹೃದಯ ಶಸ್ತ್ರಚಿಕಿತ್ಸೆ ಮಾಡಿ
ಮರುಜೀವ ನೀಡಿದ ಆದರಣೀಯ

**ಡಾ. ಸೀತಾರಾಮಭಟ್ .ಪಿ.ಎಸ್**

ಮತ್ತು ಅವರ ಧರ್ಮಪತ್ನಿ

**ಶ್ರೀಮತಿ ಡಾ. ನಿರ್ಮಲ ಎಸ್. ಭಟ್**

ಅವರಿಗೆ

## ಮುನ್ನುಡಿ

### ಕವಿತೆಯೊಳಾಸೆಗೆಯ್ವ ಫಲಮಾವುದೋ..

ರಾಮಾಯಣ ಮಹಾಭಾರತಗಳು ಜಾನಪದ, ಶಿಷ್ಟಾದಿ ವರ್ಗಭೇದ ಗಳನ್ನೆಣಿಸದೆ, ಕಾಲದೇಶಗಳ ಕಟ್ಟಳೆಯನ್ನು ಮೀರಿ ಭಾರತೀಯ ಸಂಸ್ಕೃತಿ ಯನ್ನು ಸಮೃದ್ಧಗೊಳಿಸಿರುವ ಎರಡು ತಾಯಿಬೇರುಗಳಾಗಿವೆ. ಮಹಾಭಾರತ ನಶ್ವರ ಪುರುಷಾರ್ಥಗಳನ್ನು ಸಾಧಿಸಿಕೊಳ್ಳಲು ಉದಾತ್ತ ಚರಿತರೆನಿಸಿಕೊಂಡವರೂ ಅಧೋಗತಿಗೆ, ಅಲ್ಪತನಕ್ಕೆ ಇಳಿದ ಕಾಳಗದ ಕತೆಯಾದರೆ; ರಾಮಾಯಣ ಪರಮ ಪುರುಷಾರ್ಥಕ್ಕಾಗಿ ಅಲ್ಪರೆನಿಸಿದವರೂ ಅಲ್ಪತ್ವವನ್ನು ಕಳೆದುಕೊಂಡು ಪುಣ್ಯಪ್ರದವಾದ ಚಾರಿತ್ರ್ಯಕ್ಕೆ, ಋಜುತ್ವಕ್ಕೆ ಏರಿದ ಶ್ರೇಯೋಮಾರ್ಗದ ಕಥನವಾಗಿದೆ. ಒಂದು, ಮನುಷ್ಯತ್ವದ ಅವಸರ್ಪಿಣಿಯ ಕತೆಯಾದರೆ; ಮತ್ತೊಂದು, ಮಾನವತ್ವದ ಉತ್ಸರ್ಪಿಣೀ ಮಾರ್ಗದ ಚರಿತೆಯಾಗಿದೆ. ಈ ಹಿನ್ನೆಲೆಯಲ್ಲಿ ಪೂರ್ಣದೃಷ್ಟಿಯ ಕವಿಯಾದ ಕುವೆಂಪು ಪ್ರತಿಭೆ ಮಹಾಭಾರತಕ್ಕಿಂತಲೂ ರಾಮಾಯಣಕ್ಕೇ ಒಲಿದಿರುವುದು ಸಹಜವೇ ಸರಿ.

ಕುವೆಂಪು ಶೂದ್ರತಪಸ್ವಿಯ ಮುನ್ನುಡಿಯಲ್ಲಿ "ಉತ್ತಮ ಶಿಲ್ಪಿ ಕಟ್ಟಿದ ದೇವಾಲಯದಲ್ಲಿ ಅದು ಹಳತಾಗುತ್ತ ಬಂದಂತೆಲ್ಲ, ಇಲಿ ಹಲ್ಲಿ ಬಾವಲಿ ಮೊದಲಾದ ಅನಾಹೂತ ಜೀವಜಂತುಗಳೂ ಗೂಡು ಬೀಡು ಮಾಡುವುದುಂಟು. ವಾಲ್ಮೀಕಿಯ ಮಹಾಕೃತಿಗೂ ಅಂತಹ ಗತಿ ಒದಗಿದರೆ ಅದು ಅದರ ಪುರಾತನತ್ವಕ್ಕೆ ಲಕ್ಷಣವಾಗುತ್ತದೆ. ದೇವಾಲಯಕ್ಕೆ ಪೂಜೆಗೆಂದು ಹೋಗುವವರು ಯಾರೂ, ಅಲ್ಲಿವೆ ಎಂಬ ಒಂದು ಕಾರಣದಿಂದಲೇ, ಇಲಿ ಹಲ್ಲಿ ಬಾವಲಿಗಳನ್ನು ಹೇಗೆ ಪೂಜಿಸುವುದಿಲ್ಲವೋ ಹಾಗೆಯೇ ಮಹಾಕವಿಯ ಕೃತಿಯಲ್ಲಿ ಬಂದಳಿಕೆಗಳಂತೆ ಸೇರಿಕೊಂಡಿರುವ ಅಲ್ಪದೃಷ್ಟಿಯ ಕುಕವಿ ಕೃತವಾದ ಪ್ರಕ್ಷಿಪ್ತಗಳನ್ನೂ ತಿಳಿದವರು ಯಾರೂ ಗೌರವಿಸುವುದಿಲ್ಲ" ಎಂದು ಬರೆದಿದ್ದಾರೆ. ಮತ್ತೊಂದೆಡೆ ನಮ್ಮ ಪ್ರಾಚೀನ

ಪರಂಪರೆಯನ್ನು ವರ್ಣಿಸುತ್ತ "ಹಳೆಯ ಚಿನ್ನಾಭರಣಗಳೆಂಬ ಕಾರಣಕ್ಕೆ ಯಾರೂ ಅದನ್ನು ಎಸೆಯುವುದಿಲ್ಲ. ಅದನ್ನು ಕರಗಿಸಿ ಬೇಕಾದ ಹೊಸರೂಪವನ್ನು ಅದಕ್ಕೆ ನೀಡಿ ಧರಿಸುತ್ತಾರೆ" ಎಂದಿದ್ದಾರೆ. ಅವರ 'ಹೊನ್ನ ಕಾಯಿಸಿ ಹಿಡಿದು ಬಡಿದಿಷ್ಟ ದೇವತಾ ವಿಗ್ರಹಕ್ಕೊಗ್ಗಿಸುವ ಅಸಲು ಕಸುಬ'ನ್ನು ಶ್ರೀರಾಮಾಯಣ ದರ್ಶನಂ ಕೃತಿಯಲ್ಲೂ ನಾವು ಕಾಣುತ್ತೇವೆ.

ಅಲ್ಪದೃಷ್ಟಿಯ ಕುಕವಿಗಳಿಂದಾಗಿ ಪುರಾತನವಾದ ವಾಲ್ಮೀಕಿ ರಾಮಾಯಣದಲ್ಲಿ ನಾನಾ ಪ್ರಕ್ಷಿಪ್ತಗಳು ಸೇರಿಸಿರುವ ಕಾರಣ ಸಾಮಾನ್ಯ ದೃಷ್ಟಿಗೆ ಸಹಜವಾಗಿಯೇ ರಾಮಾಯಣವು ಹಲವಾರು ಪ್ರಶ್ನೆ, ಸಮಸ್ಯೆ, ಗೊಂದಲಗಳ ಗೂಡಿನಂತೆ ತೋರುತ್ತದೆ. ಅಂತಹ ಅದೆಷ್ಟೋ ಜಟಿಲತೆಗಳನ್ನು 'ಶ್ರೀರಾಮಾಯಣ ದರ್ಶನಂ' ಬಗೆದಿದೆ. ಉದಾಹರಣೆಗೆ, ವಿಭೀಷಣ ದೇಶದ್ರೋಹಿ; ಇವನಿಂದ ಮುಂದೆ ತನಗೆ ಅಪಾಯವೊದಗಲಿದೆ ಎಂದು ರಾವಣನಿಗೆ ಚೆನ್ನಾಗಿ ಗೊತ್ತಿತ್ತು. "ನಾಗ್ನಿರ್ನಾನ್ಯಾನಿ ಶಸ್ತ್ರಾಣಿ ನ ನಃ ಪಾಶಾ ಭಯಾವಹಃ । ಘೋರಾ ಸ್ವಾರ್ಥಪ್ರಯುಕ್ತಾಸ್ತು ಜ್ಞಾತಯೋ ಮೇ ಭಯಾವಹಾಃ । ಉಪಾಯಮೇತೇ ವಕ್ಷ್ಯಂತಿ ಗ್ರಹಣೇ ನಾತ್ರ ಸಂಶಯಃ । ಕೃತ್ಸ್ನಾದ್ಭಯಾದ್ ಜ್ಞಾತಿಭಯಂ ಸುಕಷ್ಟಂ ವಿದಿತಂ ಚ ನಃ॥" (ನನಗೆ ಬೆಂಕಿ ಅಥವಾ ಯಾವುದೇ ಶಸ್ತ್ರಾಸ್ತ್ರಗಳ ಭಯವಿಲ್ಲ. ಆದರೆ ಬೆನ್ನ ಹಿಂದೆ ಚೂರಿ ಮಸೆವ ಸ್ವಾರ್ಥಿಗಳಾದ ನಮ್ಮ ಬಾಂಧವರ ಸಂಚಿಗೊಳಗಾಗಿ ಶತ್ರುಗಳ ಸೆರೆಯಾಳಾಗಲು ನನಗೆ ಇಷ್ಟವಿಲ್ಲ) (ವಾಲ್ಮೀಕಿ ರಾಮಾಯಣ 6.16). ಎಂದು ಸ್ವತಃ ರಾವಣನೇ ವಿಭೀಷಣನನ್ನು ಕುರಿತು ಸೂಚ್ಯವಾಗಿ ನುಡಿದಿದ್ದಾನೆ. ಇಂತಹ ದ್ರೋಹಿಯನ್ನು ರಾವಣ ಪ್ರಾರಂಭದಲ್ಲೇ ಇಲ್ಲವಾಗಿಸಿಬಿಟ್ಟಿದ್ದರೆ ದುರಂತಗಳ ಪರಂಪರೆ ಅವನ ಮೇಲೆ ಎರಗುತ್ತಲೇ ಇರಲಿಲ್ಲ. ತನ್ನ ಉಳಿವಿಗಾಗಿ ಹಡೆದ ಮಕ್ಕಳ, ಒಡಹುಟ್ಟಿದ ತಮ್ಮಂದಿರ ಪ್ರಾಣಾಹುತಿಯನ್ನೂ ಲೆಕ್ಕಿಸದ ಧೀರನಾದ ರಾವಣನಿಗೆ ವಿಭೀಷಣನನ್ನು ಕೊಲ್ಲುವುದು ಕಷ್ಟದ ಕೆಲಸವೂ ಆಗಿರಲಿಲ್ಲ. ಇಂತಹ ವಿಭೀಷಣನನ್ನು ರಾವಣ ಏತಕ್ಕಾಗಿ ಕೊಲ್ಲದೇ ಬಿಟ್ಟ ಎಂಬ ಪ್ರಶ್ನೆ ವಾಲ್ಮೀಕಿ ರಾಮಾಯಣದಲ್ಲಿ ಬಗೆಹರಿಯುವುದಿಲ್ಲ. ಆದರೆ ಅದಕ್ಕೆ ಶ್ರೀರಾಮಾಯಣ ದರ್ಶನಂ ಸಮಂಜಸವಾದ ಉತ್ತರ ನೀಡುತ್ತದೆ.

ಹಾಗೆಯೇ ಮೂಲ ವಾಲ್ಮೀಕಿ ರಾಮಾಯಣದಲ್ಲಿ ಮಂಥರೆ, ವಾಲಿ, ರಾವಣ ಮೊದಲಾದವರು ತಮ್ಮ ವ್ಯಾಮೋಹ, ಮಾತ್ಸರ್ಯ, ಅಹಂಕಾರಗಳಿಂದಾಗಿ ದುಷ್ಟರಂತೆ, ಪತಿತರಂತೆ ಕಾಣಿಸುತ್ತಾರೆ. ಮನುಷ್ಯ ಸಹಜವಾದ ಈ ವ್ಯಾಕುಲಗಳ ಸಮೇತ ಅವರನ್ನು ಸಹಾನುಭೂತಿಯ ದೃಷ್ಟಿಯಿಂದ ನೋಡಲು ಕುವೆಂಪು ಅವರ ರಾಮಾಯಣ ನಮ್ಮನ್ನು ಸಜ್ಜುಗೊಳಿಸುತ್ತದೆ. ಅಲ್ಲದೇ ವಾಲ್ಮೀಕಿ ರಾಮಾಯಣದ ಕುರಿತು ಕವಿ ರವೀಂದ್ರರು "ಉಷೋದಯದ ಪೂರ್ವದಿಗಂತದಲ್ಲಿ ಮೂಡುವ ತಾರೆ ಸೂರ್ಯೋದಯಾನಂತರದ ತುಂಬು ಬೆಳಕಿನಲ್ಲಿ ಮುಳುಗಿಹೋಗುವಂತೆ, ಸೀತಾದೇವಿಯ ಕಣ್ಣೀರಿನಲ್ಲಿ ಊರ್ಮಿಳಾದೇವಿ ಸಂಪೂರ್ಣವಾಗಿ ಕೊಚ್ಚಿಹೋದಳು. ವಾಲ್ಮೀಕಿ ಮಹಾಕವಿ ತನ್ನ ಕಲ್ಪನಾಶಕ್ತಿಯ ಕರುಣಜಲವೆಲ್ಲವನ್ನೂ ಸೀತಾದೇವಿಯ

ಪುಣ್ಯಾಭಿಷೇಕದಲ್ಲಿಯೇ ಮುಗಿಸಿಬಿಟ್ಟಿದ್ದಾನೆ. ಕಳೆಗುಂದಿದ ಮುಖವುಳ್ಳವಳೂ ಸಮಸ್ತ ಐಹಿಕ ಸುಖದಿಂದ ವಂಚಿತಳೂ ಆಗಿ ಸೀತಾದೇವಿಯ ಛಾಯೆಯಲ್ಲಿ ಅವಕುಂಠನವತಿಯಾಗಿ ನಿಂತಿರುವ ಮತ್ತೊಬ್ಬ ರಾಜಕುಮಾರಿಯ ಚಿರದುಃಖದಿಂದ ತಪ್ತವಾದ ನಮ್ರ ಲಲಾಟದ ಮೇಲೆ ತನ್ನ ಕಮಂಡಲುವಿನ ಒಂದು ತೊಟ್ಟು ನೀರನ್ನೂ ಚಿಮುಕಿಸಿಲ್ಲವಲ್ಲ" ಎಂದಿದ್ದಾರೆ. ಆದಿಕವಿಯಿಂದ ಉಪೇಕ್ಷಿತವಾದ ಊರ್ಮಿಳೆ ಮತ್ತು ಅಂತಹ ಇನ್ನೂ ಹಲವಾರು ಉದಾತ್ತ ಪಾತ್ರಗಳು ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ'ನಲ್ಲಿ ಮರುಜೀವ ಪಡೆದಿವೆ. ಅದು ಊರ್ಮಿಳೆಯ ಮೌನತಪಸ್ಸಿರಬಹುದು, ಮಾರೀಚನ ನಿಯತ್ತಿರಬಹುದು ಅಥವಾ ಅತಿಕಾಯನ ಒಳತೋಟಿ ಇರಬಹುದು.

* * *

ಶ್ರೀರಾಮಕೃಷ್ಣರು ಸಾಂಸಾರಿಕ ಜಂಜಾಟದಲ್ಲಿ ಮುಳುಗಿರುವ ಗೃಹಸ್ಥರಿಗೆ ಉಪದೇಶಿಸುತ್ತ "ಮೊಸಳೆಗಳು ತುಂಬಿದ ಮಡುವಿನೊಳಗೆ ಇಳಿಯುವಾಗ ಮೈಗೆಲ್ಲ ಅರಿಶಿನ ಹಚ್ಚಿಕೊಳ್ಳಬೇಕು. ಅದರ ವಾಸನೆಗೆ ಹೇಸಿ ಮೊಸಳೆಗಳು ಹತ್ತಿರಕ್ಕೆ ಸುಳಿಯುವುದಿಲ್ಲ" ಎಂದು ಕಿವಿಮಾತು ಹೇಳುತ್ತಾರೆ (ಇದಕ್ಕೆ ವೈಜ್ಞಾನಿಕ ಆಧಾರಗಳನ್ನು ಬೆದಕಲಾಗದು; ಇದೊಂದು ಕವಿಸಮಯವಿರಬೇಕು). ಶ್ರೀರಾಮಕೃಷ್ಣರ ಇಂತಹ ಉಪದೇಶಗಳು ಕುವೆಂಪು ಅವರ ಸಾಹಿತ್ಯವನ್ನು ಪ್ರಭಾವಿಸಿದ್ದವು ಎನಿಸುತ್ತದೆ. ಏಕೆಂದರೆ ಅವರ ಮಹಾಕಾವ್ಯದಲ್ಲಿ ದುರಂತಪ್ರಜ್ಞೆಯ ದರ್ಶನ ಆಗುತ್ತದಾದರೂ ಅದುವೇ ಆ ಕಾವ್ಯದ ಅಂತಿಮ ವಾಸ್ತವವಾಗುವುದಿಲ್ಲ, ಜೀವನಾನುಭವದ ಅಂತಿಮ ವಿವೇಕವಾಗುವುದಿಲ್ಲ. ರಾಮರಾವಣರ ಯುದ್ಧವಾದ ಮೇಲೆ ಇಡೀ ಸ್ವರ್ಣಲಂಕೆ ಸ್ಮಶಾನ ಲಂಕೆಯಾಗುತ್ತದೆ. ಆದರೆ 'ಶ್ರೀರಾಮಾಯಣ ದರ್ಶನಂ' ಮಂಗಳಾಚರಣೆಯೊಂದಿಗೆ ಕೊನೆಯಾಗುತ್ತದೆಯೇ ವಿನಃ ಲಂಕಾವಿನಾಶದಿಂದೊದಗುವ ವಿಷಾದ ಯೋಗದೊಂದಿಗೆ ವಿರಮಿಸುವುದಿಲ್ಲ.

ಯುದ್ಧದ ದುರಂತಗಳನ್ನು ಬಹಳ ನಾಟಕೀಯವಾಗಿ ನಿರೂಪಿಸುವ ಅವರ 'ಶ್ಮಶಾನ ಕುರುಕ್ಷೇತ್ರಂ'ಗೂ ಈ ಮಾತು ಅನ್ವಯಿಸುತ್ತದೆ. ಅದರ ರಚನೆಯಾಗುವ ವೇಳೆಗೆ (1931) ಜಗತ್ತಿಗೆ ಮೊದಲನೆಯ ಮಹಾಯುದ್ಧದ ಭೀಕರತೆಯ ಕರಾಳ ದರ್ಶನವಾಗಿತ್ತು. ಆದಾಗ್ಯೂ ಕುವೆಂಪು ಕಲಿಪುರುಷನ ಬಾಯಲ್ಲಿ ಈ ಕೆಳಗಿನ ಮಾತುಗಳನ್ನು ಹೇಳಿಸುತ್ತಾರೆ:

*ರಸಪೂರ್ಣ ಶೂನ್ಯದಿಂದೊಗೆತಂದುದೀ*
*ವಿಶ್ವಂ; ಅದರೊಳೆ ವಿಲೀನಮಾಗಡಗುವುದು ತಾನ್.*
*ಆದೊಡೇನ್? ಮರಳಿ ಬೇರೊಂದಾಕೃತಿಯ ತಳೆದು,*
*ಬೇರೊಂದು ಕಟ್ಟಳೆಗೆ ತಲೆಬಾಗಿ, ಬೇರೊಂದು*
*ಕಾಲದಲಿ ಮೂಡುವುದು, ಲೀಲೆಯೆಂಬುವುದೆಲ್ಲ*
*ಮೂಡುವುದು ಮುಳುಗುವುದರಲ್ಲಿಹುದು. ಅದಕೇಕೆ*
*ಮರುಗುವುದು?*

ಇಂದಿನ ಕಾಲದಲ್ಲಿ ನಿಂತ ನಾವು ಕುವೆಂಪು ಅವರ ಈ ದೃಷ್ಟಿಯನ್ನು ಗುಣವೆಂದೋ ದೋಷವೆಂದೋ ತರ್ಕಿಸುವುದು ವ್ಯರ್ಥ. ಕಾಲದ ಪರೀಕ್ಷೆಯಲ್ಲಿ ಗೆದ್ದು ಬಂದ (ಟೈಮ್ ಟೆಸ್ಟೆಡ್) ಪರಂಪರೆಯ ನಿರ್ಮಾತೃಗಳ 'ಆರ್ಷ ಪ್ರಯೋಗ'ಗಳ ಬಗ್ಗೆ ಅಂತಹ ಬಾಲಿಶ ತರ್ಕ ಅಪ್ರಸ್ತುತ ಕೂಡ. ಆದ್ದರಿಂದ ಇದನ್ನು 'ಕುವೆಂಪುತನ' ಎಂದಷ್ಟೇ ನಾವು ಗುರುತಿಸಬಹುದಾಗಿದೆ.

ಶ್ರೀರಾಮಕೃಷ್ಣ-ವಿವೇಕಾನಂದರ ಆಧ್ಯಾತ್ಮಿಕ ತಿಳಿವಳಿಕೆಯ ಜೊತೆಗೆ ಪ್ರಖರವಾದ ನೈತಿಕ ಪ್ರಜ್ಞೆಯೂ ಕುವೆಂಪು ಸಾಹಿತ್ಯವನ್ನು ನಿಯಂತ್ರಿಸುತ್ತಿತ್ತು. ಉದಾಹರಣೆಗೆ, ವಾಲ್ಮೀಕಿ ರಾಮಾಯಣದಲ್ಲಿ ಸುಗ್ರೀವನು ಅಣ್ಣ ವಾಲಿಯನ್ನು ಮೋಸದಿಂದ ಕೊಲ್ಲಿಸಿ ಅವನ ಹೆಂಡತಿಯೊಂದಿಗೆ, ಅಂದರೆ ತನ್ನ ಅತ್ತಿಗೆ ತಾರೆಯೊಂದಿಗೆ, ಮಲಗುತ್ತಾನೆ. ಅದಕ್ಕೂ ಮುನ್ನ ವಾಲಿ ತಮ್ಮನನ್ನು ಗಡಿಪಾರು ಮಾಡಿ ತಮ್ಮನ ಹೆಂಡತಿಯಾದ ರುಮೆಯನ್ನು ಭೋಗಿಸುತ್ತಾನೆ. 'ಶ್ರೀರಾಮಾಯಣ ದರ್ಶನಂ'ನಲ್ಲಾದರೂ ಈ ಬಗೆಯ ಅಶ್ಲೀಲ ಅನೈತಿಕ ವ್ಯಸನಗಳಿಗೆ ಆಸ್ಪದವಿಲ್ಲ. ಇಲ್ಲಿ ವಾಲಿ ರುಮೆಯನ್ನು ಸುಮ್ಮನೆ ಸೆರೆವಾಸದಲ್ಲಿ ಇಡುತ್ತಾನೆ ಅಷ್ಟೇ. ಮಾತ್ರವಲ್ಲ 'ರುಮೆ ನನ್ನ ಮಗಳು' ಎನ್ನುತ್ತಾನೆ. ಸೆರೆವಾಸದ ದುಃಖದಲ್ಲಿ ಮುಳುಗಿದ್ದ ಅವಳನ್ನು ಖುಷಿ ಪಡಿಸಲು "ಒಂದಲ್ಲ ಒಂದು ದಿವಸ ಸುಗ್ರೀವನನ್ನು ಹೊತ್ತು ತಂದು ರುಮೆಗೆ ಒಪ್ಪಿಸಿ ಸಂತೋಷ ಉಂಟು ಮಾಡುತ್ತೇನೆ" ಎಂದು ಸಂಕಲ್ಪಿಸುತ್ತಾನೆ.

ಈ ಹಿಂದೆ ಹೇಳಿದಂತೆ ರಾಮಾಯಣದಲ್ಲಿ ಹಲವಾರು ಪ್ರಕ್ಷೇಪಗಳಿವೆ. ರಾಮನನ್ನು ದೇವರಂತೆ ಬಿಂಬಿಸಲು ಭಕ್ತರು ವಾಲ್ಮೀಕಿ ರಾಮಾಯಣದೊಳಗೆ ಬೇಕಾಬಿಟ್ಟಿಯಾಗಿ ಹಸ್ತಕ್ಷೇಪ ಮಾಡಿ ಹಲವು ಕಟ್ಟುಕತೆಗಳನ್ನು ಅದರೊಳಗೆ ತುರುಕಿದ್ದಾರೆ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ' ಕೃತಿಯಾದರೂ ರಾಮಾಯಣವನ್ನು ಅಂತಹ ಕಟ್ಟುಕತೆಗಳಿಂದ ಬಿಡುಗಡೆಗೊಳಿಸಿದೆ.

ಮೊದಲನೆಯದಾಗಿ, ಬಹುಮುಖ್ಯ ಯುದ್ಧತಂತ್ರವೊಂದನ್ನು ರೂಪಿಸಲು ರಹಸ್ಯವಾಗಿ ಲಂಕೆಗೆ ಹೊರಟ ಆಂಜನೇಯನ ಕೈಲಿ ಕೋತಿಚೇಷ್ಟೆ ಮಾಡಿಸುವುದು, ಸಾಮಾನ್ಯ ಜನರನ್ನು ರಂಜಿಸಲು ಅವನ ಕೈಯಿಂದ ಲಂಕೆಗೆ ಬೆಂಕಿ ಹೊತ್ತಿಸಿ ವಿಕೃತ ಹಾಸ್ಯ ಸನ್ನಿವೇಶ ಸೃಷ್ಟಿಸುವುದು ಅಂತಹ ಒಂದು ಕಟ್ಟುಕತೆಯಾಗಿದೆ. ವಾಲ್ಮೀಕಿ ರಾಮಾಯಣದಲ್ಲಿ ಸ್ವರ್ಣ ಲಂಕೆಯೊಳಗೆ ಗುಪ್ತವಾಗಿ ಪ್ರವೇಶಿಸಿದ ಹನುಮಂತ ತನ್ನೊಳಗೇ ಹೀಗೆಂದುಕೊಳ್ಳುತ್ತಾನೆ: "ಹೆಚ್ಚು ಎಚ್ಚರ ವಹಿಸಬೇಕು. ಒಂದೇ ಒಂದು ಅಚಾತುರ್ಯ ಮಾಡಕೂಡದು. ನಾನಿಲ್ಲಿ ಒಬ್ಬಂಟಿ, ಇಲ್ಲಿ ನನಗೆ ಯಾರೂ ಸಹಾಯಕ್ಕೆ ಬರುವುದಿಲ್ಲ ಎಂಬುದನ್ನು ನಾನು ಮರೆಯಬಾರದು. ಯಾರು ಬೇಕಾದರೂ ಸುಲಭವಾಗಿ ನನ್ನನ್ನು ಪತ್ತೆ ಮಾಡಬಹುದು, ಬಂಧಿಸಬಹುದು. ಪತ್ತೇದಾರನೆಂದು ಅನುಮಾನಿಸಿ ನನ್ನನ್ನು ಕೊಂದು ಹಾಕಲೂ ಬಹುದು. ನನ್ನಂತಹ ಒಬ್ಬ ವ್ಯಕ್ತಿ ಇಲ್ಲಿಯತನಕ ಬಂದಿದ್ದಾನೆ ಎಂದು ಇವರಿಗೇನಾದರೂ ಗೊತ್ತಾಗಿಬಿಟ್ಟರೆ ನನ್ನ ಸ್ವಾಮಿಯ ಕೆಲಸ

ಹದಗೆಡುತ್ತದೆ. ಅವನ ನಂಬಿಕೆ ಉಳಿಸಿಕೊಳ್ಳದೆ ಹೋದರೆ ನನಗಂತೂ ಕ್ಷಮಾಪಣೆ ಇಲ್ಲ. ಆಜ್ಞೆಯನ್ನು ಶಿರಸಾ ವಹಿಸದೆ ಎಡವಟ್ಟು ಮಾಡಿಕೊಳ್ಳುವ ರಾಯಭಾರಿ ತನ್ನ ಸ್ವಾಮಿಗೆ ದ್ರೋಹ ಬಗೆಯುತ್ತಾನೆ" [ಮಹೌಜಸೋ ಮಹಾವೀರ್ಯಾ ಬಲವಂತಶ್ಚ ರಾಕ್ಷಸಾಃ । ವಂಚನೀಯಾ ಮಯಾ ಸರ್ವೇ ಸ್ವಾಮಿಕಾರ್ಯಂ ಪ್ರಕುರ್ವತಾ । ಮಯಿ ದೃಷ್ಟೇ ತು ರಕ್ಷೋಭಿ ರಾಮಸ್ಯ ವಿದಿತಾತ್ಮನಃ । ಭವೇದ್ ವ್ಯರ್ಥಮಿದಂ ಕಾರ್ಯಂ ರಾವಣಾನರ್ಥಮಿಚ್ಛತಃ । ಇಹಾಹಂ ಯದಿ ತಿಷ್ಠಾಮಿ ಸ್ವೇನ ರೂಪೇಣ ಸಂವೃತಃ । ವಿನಾಶಮುಪಯಾಸ್ಯಾಮಿ ಭರ್ತುರರ್ಥಶ್ಚ ಹಾಸ್ಯತಿ । ಭೂತಾರ್ಥಾಶ್ಚವಿನಶ್ಯಂತಿ ದೇಶಕಾಲ ವಿರೋಧಿತಾಃ । ವಿಕ್ಲವಂ ದೂತಮಾಸಾದ್ಯ ತಮಃ ಸೂರ್ಯೋದಯೇ ಯಥಾ । ಘಾತಯಂತೀಹ ಕಾರ್ಯಾಣಿ ದೂತಾಃ ಪಂಡಿತಮಾನಿನಃ ॥ (ವಾಲ್ಮೀಕಿ ರಾಮಾಯಣ 5.2)]

ಇಷ್ಟೊಂದು ಜಾಣನಾದ ಹನುಮಂತ ಹಾಸ್ಯಾಸ್ಪದವಾಗಿ ಕಪಿಚೇಷ್ಟೆ ಮಾಡಿ ಬೇಡದ ತಾಪತ್ರಯಗಳನ್ನು ಮೈಮೇಲೆ ಹಾಕಿಕೊಳ್ಳುವನೇ? ಆತಂಕಿತನಾದ ಹನುಮಂತ ಲಂಕೆಯೊಳಗೆ ಹೊಕ್ಕು ಮೊದಲ ಸಲ ಅಲ್ಲಿ ವಿಭೀಷಣನನ್ನು ಸಂಧಿಸಿ ಮಾತುಕತೆ ನಡೆಸಿದ. ಬಳಿಕ ಅವನ ಮನೆಯಿಂದ ನಿರ್ಗಮಿಸುವಾಗ ನಮ್ಮ ಗೆಲುವು ಸುನಿಶ್ಚಿತವೆಂಬ ವಿಶ್ವಾಸದಿಂದ ಹೊರಬಂದ. "ನಾನು ಲಂಕೆಗೆ ಬೆಂಕಿ ಇಟ್ಟು ಬಂದಿದ್ದೇನೆ" [ಮಯ್ಯೈವ ನಿಹಿತಾ ಲಂಕಾ ದಗ್ಧಾ ಭಸ್ಮೀಕೃತಾ ಪುರೀ।] ಎಂಬ ಹನುಮಂತನ ರೂಪಕದ ಮಾತನ್ನೇ ಭಕ್ತಾದಿಗಳು ವಾಚ್ಯದ ನೆಲೆಗಿಳಿಸಿ ಹನುಮಂತನ ಬಾಲಕ್ಕೆ ಬೆಂಕಿ ಹೊತ್ತಿಸುವುದೇ? ಆದ್ದರಿಂದಲೇ ಕುವೆಂಪು ತಮ್ಮ ರಾಮಾಯಣದಲ್ಲಿ ಹನುಮಂತನ ಕೈಲಿ ಲಂಕಾದಹನ ಮಾಡಿಸಿಲ್ಲ, ಸಂಜೀವಿನಿ ಪರ್ವತವನ್ನು ಎತ್ತಿಸಿಲ್ಲ. ಯಾವುದೇ ಅಲೌಕಿಕ ಲಘು ಚಮತ್ಕಾರಗಳಿಗೆ ಆಸ್ಪದ ನೀಡಿಲ್ಲ ಎನಿಸುತ್ತದೆ.

ಎರಡನೆಯದಾಗಿ ರಾಮಾಯಣ ಮನುಷ್ಯ, ಕೋತಿ, ಕರಡಿ, ರಾಕ್ಷಸ ಮುಂತಾದ ವಿವಿಧ ಜೀವವರ್ಗಗಳ ನಡುವೆ ನಡೆದ ಕತೆ ಎಂದು ಚಿತ್ರಿಸಿರುವುದು. ಒಂದು ವೇಳೆ ವಾಲಿ ಕೋತಿಯೇ ಆಗಿದ್ದರೆ ಅವನು ತೀರಿಕೊಂಡ ಮೇಲೆ ಅವನಿಗೆ ವೇದೋಕ್ತ ರೀತಿಯಲ್ಲಿ ಸಂಸ್ಕಾರ ಮಾಡಲು ರಾಮ ಆಜ್ಞಾಪಿಸುತ್ತಿದ್ದನೇ? ಹಲವು ನದಿಗಳ ತೀರ್ಥವನ್ನು ತರಿಸಿ ಸುಗ್ರೀವನಿಗೆ ಪಟ್ಟಾಭಿಷೇಕ ಮಾಡಿಸುತ್ತಿದ್ದನೇ? ಹನುಮಂತನನ್ನು 'ಮಹಾನ್ ವೇದವಿದ' ಎಂದು ಹೊಗಳುತ್ತಿದ್ದನೇ? ಕೋತಿಗಳೆಲ್ಲಾದರೂ ವೇದ ಮಂತ್ರೋಚ್ಚಾರಣೆ ಮಾಡುತ್ತವೆಯೇ?

ಹಿಂದೆ ಬ್ರಿಟಿಷರು ಟಿಪ್ಪುವಿನ ಪರಾಕ್ರಮವನ್ನು ಕಂಡು 'ಮೈಸೂರು ಹುಲಿ' ಎಂದು ಕರೆದಿದ್ದರು, ಶಿವಾಜಿಯ ಗೆರಿಲ್ಲಾ ಯುದ್ಧವನ್ನು ಕಂಡು 'ಬೆಟ್ಟದ ಇಲಿ' ಎಂದು ಬೆರಗಿನಿಂದ ಅವನನ್ನು ಹೊಗಳಿದ್ದರು, ಮೊದಲ ಮಹಾಯುದ್ಧದ ಸಮಯದಲ್ಲಿ ರಷ್ಯನ್ನರು ಜಪಾನೀಯರಿಗೆ ಅವರ ಚಾಣಾಕ್ಷತನವನ್ನು ಕಂಡು 'ಕೋತಿಗಳು' ಎಂಬ ಉಪನಾಮ ನೀಡಿದ್ದರು. ಇಂತಹ ಬಣ್ಣನೆಗಳನ್ನೆಲ್ಲ ವಾಚ್ಯದ ನೆಲೆಗಿಳಿಸಲು ಹೋಗಬಾರದು. ಆದರೆ ಭಕ್ತಾದಿಗಳು ರಾಮನ ದೈವತ್ವವನ್ನು ಎತ್ತಿ ಹಿಡಿಯಲು ಅನ್ಯ ಜನಾಂಗಗಳನ್ನು ಕೋತಿ, ಕರಡಿ, ರಾಕ್ಷಸ ಜಾತಿಗಳಿಗೆ ಸೇರಿಸಿದರು.

ಕುವೆಂಪು ಆದರೂ ತಮ್ಮ ಮಹಾಕಾವ್ಯದಲ್ಲಿ ಬರುವ ವಿವಿಧ ಪಾತ್ರಗಳನ್ನು ವಿವಿಧ ಪ್ರಾಣಿವರ್ಗಗಳಲ್ಲಿ ವಿಂಗಡಿಸದೇ ಎಲ್ಲರನ್ನೂ ಮನುಷ್ಯರಂತೆ ಚಿತ್ರಿಸಿದ್ದಾರೆ. ಇಂತಹ ಮಿಥ್ಯಾಕಥನವನ್ನು ರಾವಣನ ಮೂಲಕ ಬಹು ಮಾರ್ಮಿಕವಾಗಿ ವಿಡಂಬಿಸಿದ್ದಾರೆ.

"ಮಂಡೋದರಿ, ನಿನಗೆ ಗೊತ್ತಿಲ್ಲ ಅವರು ನಮ್ಮನ್ನು ಹೇಗೆ ವರ್ಣಿಸುವರೆಂದು. ದಶಶಿರ ಎಂಬುದು ನನ್ನ ಬಿರುದು. ಅದನ್ನು ಅವರು ಹತ್ತು ತಲೆಯೆಂದು ಚಿತ್ರಿಸುತ್ತಾರೆ! ದಶರಥನನ್ನು ನಾವು ಹಾಗೆ ಚಿತ್ರಿಸುತ್ತೇವೆಯೆ? ಹತ್ತು ರಥಗಳಲ್ಲಿ ಇಪ್ಪತ್ತು ಕಾಲುಗಳಿಟ್ಟು ಬರುವನೆಂದು ವರ್ಣಿಸುತ್ತೇವೆಯೆ? ನಮ್ಮ ಹೆಣ್ಣು ಮಕ್ಕಳನ್ನು ಅವರು ಕೋರೆ ಹಲ್ಲು, ಕೋಡುಗಳಿಂದ ಚಿತ್ರಿಸುತ್ತಾರಂತೆ! ನಾವು ನರಮನುಷ್ಯರ ಬಿಸಿರಕ್ತವನ್ನು ಕುಡಿದು ಬದುಕುವವರಂತೆ! ನಮ್ಮಲ್ಲಿ ಸಂಸ್ಕೃತಿ ಸಾಸಿವೆಯಷ್ಟು ಇಲ್ಲವಂತೆ! ರಾಕ್ಷಸ ಕುಲದ ನಾವು ನಿಜವಾಗಿ ರಾಕ್ಷಸರಂತೆ! ಸೂರ್ಯ ಕುಲದವರು ರವಿಯಂತೆ ದುಂಡಗೆ ಬಿಸಿಯಾಗಿರುವರೆಂದು ನಾವು ಆಡಿಕೊಳ್ಳುತ್ತೇವೆಯೆ?".

ಇನ್ನು ರಾಮ ಮರೆಯಲ್ಲಿ ನಿಂತು ವಾಲಿಯನ್ನೇಕೆ ಕೊಂದ ಎಂಬ ಪ್ರಶ್ನೆಗೆ ಹಲವಾರು ವಿವರಣೆಗಳಿವೆ. ಒಂದು ವಾದದ ಪ್ರಕಾರ ರಾಮ ವಾಲಿಯ ಎದುರು ನಿಂತು ಯುದ್ಧ ಮಾಡುವಷ್ಟು ಸಮರ್ಥನಾಗಿರಲಿಲ್ಲ. "ಒಂದು ವೇಳೆ ಅವರಿಬ್ಬರ ಮುಖಾಮುಖಿಯಾಗಿದ್ದರೆ ವಾಲಿ ಒಂದೇ ಏಟಿಗೆ ರಾಮನನ್ನು ಅಪ್ಪಳಿಸಿ ನೆಲಕ್ಕೆ ಉರುಳಿಸಿರುತ್ತಿದ್ದ" ಎಂದು ಎನ್.ಆರ್. ನಾವಲೇಕರ್ ವಾದಿಸುತ್ತಾರೆ. ಅವರು ಮುಂದುವರಿದು "ಆದ್ದರಿಂದಲೇ ರಾಮ ಹಿಂದೆ ನಿಂತು ಬಾಣ ಪ್ರಯೋಗ ಮಾಡಿದ್ದು. ಅವನು ವಾಲಿಗಿಂತಲೂ ದುರ್ಬಲನಾಗಿದ್ದ ಎಂಬ ಅಂಶವನ್ನು ಭಕ್ತರು ಒಪ್ಪಲು ಸಿದ್ಧರಿರಲಿಲ್ಲ. ರಾಮನ ಈ ಮಿತಿಯನ್ನು ಮುಚ್ಚಿ ಹಾಕಲು 'ವಾಲಿ ಎದುರಿಗೆ ನಿಂತ ವೈರಿಯ ಬಲದಲ್ಲಿ ಅರ್ಧ ತನಗೆ ಸೇರುವಂತೆ ವರ ಪಡೆದಿದ್ದ' ಎಂಬ ಕಟ್ಟುಕತೆಯನ್ನು ಸೇರಿಸಿದರು. ಇದು ವಾಲ್ಮೀಕಿ ಬರೆದ ಕತೆಯಲ್ಲ" ಎಂದು ಅವರು ಊಹಿಸುತ್ತಾರೆ. ಕುವೆಂಪು ಅವರ ಪ್ರತಿಭಾದೃಷ್ಟಿಗೂ ನಾವಲೇಕರರ ಈ ಊಹೆ ಅಹುದೆನಿಸಿರಬಹುದು. ಆದ್ದರಿಂದಲೇ ವಾಲಿ ವರ ಪಡೆದಿದ್ದ ಸಂಗತಿಯನ್ನು ಕೇವಲ ಒಂದು ವದಂತಿ ಎಂಬಂತೆ ತಮ್ಮ ಕಾವ್ಯದಲ್ಲಿ ಸೇರಿಸಿದ್ದಾರೆ. ವಾಲಿ ಇಂಥದೊಂದು ವರ ಪಡೆದಿದ್ದ ಎಂದು ವಾದಿಸುವವರಿಗೆ 'ಶ್ರೀರಾಮಾಯಣ ದರ್ಶನಂ'ನಲ್ಲಂತೂ ಪ್ರಮಾಣಗಳು ಸಿಗುವುದಿಲ್ಲ.

ಪ್ರಪಂಚದ ಎಲ್ಲ ಯುದ್ಧಗಳ ಹಿಂದಿನ ಪ್ರೇರಣೆಯೂ ಒಂದೇ ಆಗಿರುತ್ತದೆ. ಒಂದು ಜನಾಂಗ ಮತ್ತೊಂದು ಜನಾಂಗದ ಮೇಲೆ ಯಾಜಮಾನ್ಯ ಸ್ಥಾಪಿಸುವ ಉದ್ದೇಶದ್ದಾಗಿರುತ್ತದೆ. ಅಂತೆಯೇ ರಾಮರಾವಣರ ಹಣಾಹಣಿ ಏಕಚ್ಛತ್ರಾಧಿಪತ್ಯವನ್ನು ಸ್ಥಾಪಿಸುವ ಸಲುವಾಗಿ ಆರ್ಯಕುಲ-ರಾಕ್ಷಸ ಕುಲಗಳ ನಡುವೆ ನಡೆದ ಅಂತಹ ಒಂದು ನಿರ್ಣಾಯಕ ಯುದ್ಧವಾಗಿತ್ತು. ಈ ಯುದ್ಧದಲ್ಲಿ ಋಜುಮಾರ್ಗದಿಂದಲೋ, ಕುಟಿಲಮಾರ್ಗದಿಂದಲೋ, ಪರಾಕ್ರಮದಿಂದಲೋ ಅಥವಾ ಹಣೆಬರಹದಿಂದಲೋ ಅಂತಿಮವಾಗಿ ರಾಮ ಜಯಶಾಲಿಯಾದ. ಆದರೆ ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ' ಯುದ್ಧದ ಕ್ರೂರಕತೆಯಲ್ಲ. ಬಹಿರ್ಘಟನೆಗಳನ್ನು ಪ್ರತಿಕೃತಿಸುವ ಲೌಕಿಕ

ಚರಿತೆಯಲ್ಲ. ಅದು ಅಲೌಕಿಕ ನಿತ್ಯಸತ್ಯಗಳನ್ನು ಪ್ರತಿಮಿಸುವ ಸತ್ಯಸ್ಯ ಸತ್ಯ ಕಥನವಾಗಿದೆ. ಆದ್ದರಿಂದಲೇ ಈ ಮಹಾಕಾವ್ಯದಲ್ಲಿ ವಾಲಿ "ಮರೆಯ ಬೇಡ. ಬಾಳಂಚಿನಲ್ಲಿ ನಿಂತು ಸತ್ಯವನ್ನು ಹೇಳುತ್ತೇನೆ ಕೇಳು: ನಾವು ಗಟ್ಟಿ ಎಂದು ತಿಳಿದಿರುವುದೆಲ್ಲ ಜಳ್ಳು, ಬರಿ ಜಳ್ಳು! ಸಾವೆಂಬ ಗಾಳಿ ತೂರಿ ಬಂದಾಗ ಇದರ ಅರಿವಾಗುತ್ತದೆ" ಎಂದು ರಾಮನ ಸಮ್ಮುಖದಲ್ಲಿ ಹನುಮಂತನಿಗೆ ಹೇಳಿದ್ದು. ಈ ಮಾತುಗಳನ್ನು ಕುವೆಂಪು ಮತ್ತಾರ ಕೈಯಲ್ಲೂ ಹೇಳಿಸದೇ ರಾಮ ರಾವಣರಿಬ್ಬರಿಗಿಂತಲೂ ಮಿಗಿಲಿನ ಬಲಶಾಲಿಯಾದ ವಾಲಿಯಿಂದ ಹೇಳಿಸಿರುವುದು ವಿಶೇಷ.

* * *

ಪಂಪನ ಆದಿಪುರಾಣ ಬರೀ ಪುರುದೇವನು ಮುಕ್ತಿಗೆ ಸಂದ ಕಥೆಯಲ್ಲ. ಅದು ಆದಿನಾಥನ ಜೊತೆಜೊತೆಗೆ ಅಸಂಖ್ಯ ಮುನಿಗಳು, ತಪಸ್ವಿಗಳು, ಯತಿಗಳು, ಪರಾಕಿಗಳು ಹಿಂಡು ಹಿಂಡಾಗಿ ಕೇವಲಜ್ಞಾನವನ್ನು ಸಂಪಾದಿಸುವುದನ್ನು ನಿರೂಪಿಸುವ ಕನ್ನಡದ ಮೊತ್ತಮೊದಲ ಆಧ್ಯಾತ್ಮಿಕ ಕಾವ್ಯವಾಗಿದೆ. ಒಬ್ಬನೇ ಆದಿನಾಥ ಹಲವು ಭವಗಳ ಮೂಲಕ ಹಾದು ಹಂತ ಹಂತವಾಗಿ ಲೌಕಿಕದಿಂದ ಬಿಡುಗಡೆಗೊಂಡುದರ ಭವ್ಯ ನಿರೂಪಣೆಯಾಗಿದೆ. ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ' ಕೂಡ ಅಷ್ಟೇ. ಈ ಮಹಾಕಾವ್ಯವು ಶ್ರೀರಾಮನ ಹೆಸರು ಹೇಳಿಕೊಂಡು – ಮಂಥರೆಯಿಂದ ಹಿಡಿದು ರಾವಣೇಶ್ವರನವರೆಗೆ– ಹಲವಾರು ಪಾತ್ರಗಳು ಹೇಗೆ ಕೈವಲ್ಯ ಪಥದಲ್ಲಿ ನಡೆದವು ಎಂಬುದರ ಭವ್ಯಚಿತ್ರಣವಾಗಿದೆ. ಯಾವುದೇ ಪಾತ್ರ ಮಾನವತ್ವವನ್ನು ಮೀರುವ ಮೊದಲು ಮಾನವತ್ವವನ್ನು ಸಂಪಾದಿಸಿಕೊಳ್ಳಬೇಕಾಗುತ್ತದೆ. ಆ ಪಾತ್ರದೊಳಗಿನ ಮಾನವತ್ವದ ದರ್ಶನವಾದಾಗಲಷ್ಟೇ ಅದರ ಕೈವಲ್ಯ ಸಾಧನೆಯ ಬಗ್ಗೆ ಓದುಗನಲ್ಲಿ ಶ್ರದ್ಧೆ ಮೂಡುವುದು. ಈ ಪುಸ್ತಕದಲ್ಲಿ ಹಾಗೆ ಶ್ರೇಯಸ್ಸನ್ನು ಸಿದ್ಧಿಸಿಕೊಂಡ 'ಶ್ರೀರಾಮಾಯಣ ದರ್ಶನಂ'ನ ಒಂಬತ್ತು ಪಾತ್ರಗಳ ಚಿತ್ರಣವಿದೆ.

◈ **ಮಂಥರೆ:** ಆಕಾಶದ ಪೂರ್ಣಚಂದ್ರ ಬೇಕೆಂದು ಬಾಲರಾಮ ಅಳುತ್ತಿದ್ದಾಗ ಕನ್ನಡಿಯೊಳಗೆ ಚಂದಿರನ ಬಿಂಬವನ್ನು ಮೂಡಿಸಿ ಅಳುತ್ತಿದ್ದ ಅವನನ್ನು ಸಮಾಧಾನ ಪಡಿಸಿದ ಮಂಥರೆ ಮುಂದೆ ರಾಮನಿಗೆ ವನವಾಸ ದರ್ಶನವನ್ನೂ ಮಾಡಿಸುತ್ತಾಳೆ. ಕುರೂಪಿಯಾದ ಮಂಥರೆ 'ಜನಮನದ ವಿಕೃತಿಯ ಕನ್ನಡಿಯ ಪ್ರತಿಬಿಂಬ'ವಾಗಿದ್ದಳು ಎಂದು ಕವಿ ಮಂಥರೆಯನ್ನು ವರ್ಣಿಸಿದ್ದಾರೆ. ದೀಪದ ಹುಳು ಸೊಡರ ಬೆಂಕಿಗೆ ಬಲಿಯಾಗುವಂತೆ ಮಮತೆಯ ಸುಳಿಯಾದ ಮಂಥರೆಯೂ ತನ್ನ ಮೋಹದ ಬೆಂಕಿಯನ್ನೇ ತನ್ನ ಪಾಲಿನ ಬೆಳಕೆಂದು ಭಾವಿಸಿ ದಗ್ಧವಾಗಿ ಹೋಗುತ್ತಾಳೆ.

◈ **ಶಬರಿ:** "ಶರೀರ ಗೂಡುವೋಗದ ಮುನ್ನ, ಹಲ್ಲು ಹೋಗಿ, ಬೆನ್ನು ಬಾಗಿ.... ಮುಪ್ಪಿಂದೊಪ್ಪವಳಿಯದ ಮುನ್ನ, ಮೃತ್ಯು ಮುಟ್ಟದ ಮುನ್ನ".. ಎಂಬ ಬಸವಣ್ಣನ ಪೂಜಾ ಸಂಕಲ್ಪವೇ ಹೆಣ್ಣಾಗಿ ಜೀವ ತಳೆದಂತೆ ಶಬರಿ ಜೀವಿಸಿದ್ದಳು. ಅವಳು ತನ್ನ ಗುರು ಮಾತಂಗರ ಮಾತನ್ನೇ ವೇದವಾಕ್ಯವೆಂದು ನಂಬಿ ತನ್ನ ದೈವವನ್ನು, ರಾಮನನ್ನು, ಎದುರು ನೋಡುತ್ತಿದ್ದಳು. ಇಂತಹವಳಿಗೆ ರಾಮ ದೈವವಾಗಿ ಅಲ್ಲ, ಮಾನುಷ

ರೂಪದಲ್ಲಿ ದರ್ಶನ ನೀಡುತ್ತಾನೆ. ಮನುಷ್ಯ ಸಹಜ ಸಮಸ್ತ ಮೋಹ, ವ್ಯಾಕುಲಗಳ ಸಮೇತ ಅವಳೆದುರು ನಿಲ್ಲುತ್ತಾನೆ. ಅವಳಿಗೆ ಸಾಂತ್ವನ ನೀಡಬೇಕಾದವನು ಅವಳಿಂದ ಸಾಂತ್ವನ ಪಡೆಯುತ್ತಾನೆ. ಸೀತೆಯನ್ನು ಕಳೆದುಕೊಂಡು ದುಃಖತಪ್ತನಾಗಿದ್ದ ರಾಮನಿಗೆ ತಾಯಿ ಕೌಸಲ್ಯೆಯ ವಾತ್ಸಲ್ಯ ಸಾಂತ್ವನಗಳ ಅಗತ್ಯವಿರುತ್ತದೆ. ಆ ಕೊರತೆಯನ್ನು ಶಬರಿ ನೀಗಿಸುತ್ತಾಳೆ. ಇದನ್ನೇ ಕವಿ "ಭಗವಂತನು ಭಕ್ತ ನಿರೀಕ್ಷಿಸಿದ ರೂಪದಿಂದ ಬರುತ್ತಾನೆಯೆ?" ಎಂದು ಕೇಳುವುದು.

◈ **ವಾಲಿ:** ಮೂಲ ರಾಮಾಯಣದಲ್ಲಿರುವಂತೆ ಇಲ್ಲಿ ವಾಲಿ ವಿಷಯ ಲಂಪಟನಲ್ಲ, ಸೋದರ ದ್ವೇಷಿಯಲ್ಲ. ದ್ವೇಷಾಸೂಯೆಗಳು ಮನುಷ್ಯ ಸಹಜ ಕ್ಷಣಿಕ ವಿಕಲ್ಪಗಳಾಗಿವೆಯೇ ವಿನಾ ಅವೇ ಮನುಷ್ಯನ ನಿಜ ಸ್ವಭಾವವಲ್ಲ. ಯಾವುದೋ ಕಾಲದಲ್ಲಿ ಕ್ಷುಲ್ಲಕ ಕಾರಣಕ್ಕೆ ವಾಲಿ ಸುಗ್ರೀವರ ನಡುವೆ ವೈರತ್ವ ಮೂಡಿತ್ತಾದರೂ ವಿಕೃತಗೊಂಡ ಆ ಸಂಬಂಧವನ್ನು ನೇರ್ಪುಗೊಳಿಸಿಕೊಳ್ಳುವ ಸಲುವಾಗಿ ವಾಲಿ ಸತತವಾಗಿ ವಿಫಲ ಪ್ರಯತ್ನ ಮಾಡುತ್ತಾನೆ. ಕೊನೆಗೆ ಅಚಾತುರ್ಯ ವಶದಿಂದ ರಾಮಬಾಣಕ್ಕೆ ಬಲಿಯಾಗುತ್ತಾನೆ. ವಾಲ್ಮೀಕಿಯ ರಾಮ ತನ್ನ ಕೊಲೆಯ ಕೃತ್ಯವನ್ನು ನಾನಾ ವಿಧದಲ್ಲಿ ಸಮರ್ಥಿಸಿಕೊಳ್ಳುತ್ತಾನೆ (ವಾಲ್ಮೀಕಿ ರಾಮಾಯಣ 4.18). ಆದರೆ ಕುವೆಂಪು ರಾಮ ಹಾಗೆ ವಿತಂಡ ವಾದ ಮಾಡುವುದಿಲ್ಲ. ತನ್ನಿಂದಾದ ಅಚಾತುರ್ಯಕ್ಕೆ ಪರಿತಪಿಸಿ ಕಣ್ಣೀರಿಡುತ್ತಾನೆ.

◈ **ಮಾರೀಚ:** ತಾಟಕಿಯ ಮಗನಾದ ಮಾರೀಚ ಬಹು ಹಿಂದೆಯೇ ವಿಜೃಂಭಿಸಿದ ರಾಮಬಾಣದ ರುಚಿ ನೋಡಿದ್ದ. ಅದು ಹೇಗೋ ರಾಮಬಾಣದಿಂದ ಬದುಕುಳಿದ ರಾಕ್ಷಸಕುಲದ ಏಕಮಾತ್ರ ವ್ಯಕ್ತಿಯಾಗಿದ್ದ. ಹೀಗೆಯೇ ರಾಕ್ಷಸೀ ವೃತ್ತಿಯನ್ನು ಮುಂದುವರಿಸಿದಲ್ಲಿ ಇಂದಲ್ಲ ನಾಳೆ ರಾಮನಿಂದ ಸಾವು ನಿಶ್ಚಿತವೆಂದು ಮನಗಂಡು ದಂಡಕಾರಣ್ಯದಲ್ಲಿ ತಪಸ್ವಿಯ ಬದುಕನ್ನು ಕೈಗೊಂಡಿದ್ದ. ರಾವಣ ಇಂತಹ ಮಾರೀಚನ ಬಳಿಗೆ ಬಂದು ಸೀತಾಪಹರಣಕ್ಕೆ ನೆರವಾಗು ಎಂದು ಕೇಳಿದಾಗ ಮಾರೀಚ ಹೌಹಾರಿದ. ತನ್ನ ಸ್ವಾಮಿ ಎಂಬುದನ್ನೂ ಲೆಕ್ಕಿಸದೇ 'ಸೀತೆಯ ತಂಟೆಗೆ ಹೋಗದಿರು' ಎಂದು ರಾವಣನಿಗೆ ಬುದ್ಧಿವಾದ ಹೇಳಿದ. ರಾವಣನೇನೋ ಇವನ ಎಚ್ಚರಿಕೆಯ ಮಾತುಗಳನ್ನು ಕಾಲಕಸ ಗೈಯ್ಯುತ್ತಾನೆ. ಆದರೆ ಮಾರೀಚ ವಿಭೀಷಣನಂತೆ ಉಪ್ಪುತಿಂದ ಮನೆಗೆ ದ್ರೋಹ ಬಗೆಯಲಿಲ್ಲ. ಕೊನೆತನಕ ತನ್ನ ಒಡೆಯನಿಗೆ ವಿಧೇಯನಾಗಿದ್ದ. ರಾವಣನ ಮೊದಲ ಪ್ರತಿವಾದಿಯಂತೆ ಕಾಣಿಸುವ ಇವನು ವಾಸ್ತವದಲ್ಲಿ ರಾವಣನ ಭವಿಷ್ಯದ ಅಸಲಿ ಪ್ರವಾದಿಯಾಗಿದ್ದ.

◈ **ಮಂಡೋದರಿ:** ಕವಿ ಮಂಡೋದರಿಯನ್ನು ಸೀತೆಗಿಂತಲೂ ಮಿಗಿಲಿನ ನೆಲೆಯಲ್ಲಿ ಇರಿಸಿದ್ದಾನೆ. ಸಹನಶೀಲೆಯಾದ ಸೀತೆ ಎಷ್ಟಾದರೂ ಭೂದೇವಿಯ ಮಗಳು. ಮಂಡೋದರಿಯಾದರೂ ಮಹಾಕವಿಯ ನಾಲಗೆಯಿಂದ 'ಭೂದೇವಿ' ಎಂದು ವರ್ಣಿತಳಾಗಿರುವ ಏಕಮೇವ ಪತಿವ್ರತೆಯಾಗಿದ್ದಾಳೆ. ಈ ಪುಸ್ತಕದಲ್ಲಿ ಬರುವ ಸತಿ ಮಂಡೋದರಿಯ ಕತೆ ಪತಿ ರಾವಣನ ಅಂತರಂಗದ ವ್ಯಾಕುಲದ ಕತೆಯೂ

ಆಗಿದೆ. ಮೂಲ ರಾಮಾಯಣದಲ್ಲಿ ಚಿತ್ರಿತವಾದಂತೆ ರಾವಣ ಸ್ತ್ರೀಲೋಲನಲ್ಲ, ಅಂದ ಮೇಲೆ ಮಂಡೋದರಿ ಪತಿಪ್ರೇಮದಿಂದ ವಂಚಿತೆಯಾದ ನತದೃಷ್ಟ ಹೆಣ್ಣೆಂಬುದು ದೂರದ ಮಾತಾಯಿತು. ರಾವಣ ತನ್ನ ಅಂತರಂಗದ ಸಮಸ್ತ ವೇದನೆ ವಿಕಲ್ಪಗಳನ್ನೂ ಮಂಡೋದರಿಯ ಮುಂದೆ ಅನಾವರಣ ಮಾಡಿ ನಿರಾಳನಾಗುತ್ತಿದ್ದ.

◈ **ಮಹಾಪಾರ್ಶ್ವ:** ಮೂಲ ರಾಮಾಯಣದಲ್ಲಿ ಮಹಾಪಾರ್ಶ್ವ ರಾವಣನ ಸಹೋದರನಾಗಿದ್ದರೆ ಕುವೆಂಪು ರಾಮಾಯಣದಲ್ಲಿ ಅವನು ರಾವಣನ ಸೇನಾಧಿಪತಿಯಾಗಿದ್ದಾನೆ. ರಾಮನೆದುರು ನಮ್ಮ ಸೋಲು ಶತಸ್ಸಿದ್ಧ ಎಂಬ ವಿಭೀಷಣನ ಮಾತುಗಳನ್ನೇ ಮಹಾಪಾರ್ಶ್ವನೂ ಪುನರುಚ್ಚರಿಸುವನಾದರೂ ವಿಭೀಷಣನಂತೆ ಹೋಗಿ ರಾಮನ ಪಕ್ಷ ಸೇರಿಕೊಳ್ಳುವುದಿಲ್ಲ. ಸಾಯುವೆನೆಂದು ಗೊತ್ತಿದ್ದೂ ಸ್ವಾಮಿನಿಷ್ಠೆಗೆ ದ್ರೋಹವೆಸಗಲಿಲ್ಲ. ರಾಮಬಾಣದೆದುರು ನಿಲ್ಲದೇ ರಾವಣ ಮೂರ್ಛೆ ಹೋದಾಗ ಸಾರಥಿಯು ರಥವನ್ನು ರಣಭೂಮಿಯಿಂದ ಆಚೆಗೆ ಓಡಿಸಿಕೊಂಡು ಹೋಗುತ್ತಾನೆ. ಸ್ವಲ್ಪ ಹೊತ್ತಾದ ನಂತರ ರಾವಣ ಮೂರ್ಛೆ ತಿಳಿದೆದ್ದ ಮೇಲೆ ಸಾರಥಿ ಹೀಗೆ ರಥವನ್ನು ಪಲಾಯನ ಮಾಡಿಸಿದ್ದನ್ನು ಖಂಡಿಸುತ್ತಾನೆ. 'ಪುನಃ ರಣರಂಗದತ್ತ ರಥವನ್ನು ನಡೆಸು' ಎಂದು ಸಾರಥಿಗೆ ಆಜ್ಞೆ ಮಾಡುತ್ತಾನೆ. ರಾಮಾಯಣ ದರ್ಶನಂನಲ್ಲೂ ವಾಲ್ಮೀಕಿ ರಾಮಾಯಣದ ಈ ಪ್ರಸಂಗ ಬರುತ್ತದಾದರೂ ಕುವೆಂಪು ಸ್ವಲ್ಪ ಬದಲಾವಣೆ ಮಾಡಿದ್ದಾರೆ. ರಾವಣನ ಬದಲಾಗಿ ಮಹಾಪಾರ್ಶ್ವನನ್ನು ರಥಾರೋಹಿಯನ್ನಾಗಿಸಿದ್ದಾರೆ. ರಾವಣನ ಸಾವಿನ ಭಾಗವನ್ನು ಓದುವಾಗ ಈ ಬದಲಾವಣೆಯ ಔಚಿತ್ಯ ಓದುಗರಿಗೆ ಮನವರಿಕೆಯಾಗುತ್ತದೆ.

◈ **ಅತಿಕಾಯ:** ಅತಿಕಾಯನ ತಾಯಿಯಾದ ಧಾನ್ಯಮಾಲಿನಿ ರಾವಣನ ಮಡದಿಯಾಗಿದ್ದಳು. ರಾವಣನ ಮಡದಿಯಾಗುವ ಮುನ್ನ ಪತಿವ್ರತೆಯಾದ ಆಕೆ ಮತ್ತೊಬ್ಬ ರಾಜನಿಗೆ ಪಟ್ಟದ ರಾಣಿಯಾಗಿದ್ದಳು. ತಾಯಿಯ ಇಚ್ಛೆಗೆ ವಿರುದ್ಧವಾಗಿ ತಾನು ರಾವಣನಿಗೆ ಜನಿಸಿದ ಮಗನಾಗಿದ್ದೇನೆ ಎಂಬ ಅರಿವು ಅತಿಕಾಯನಲ್ಲಿ ಕ್ಷೋಭೆ ಉಂಟು ಮಾಡಿತ್ತು. ಅವನಲ್ಲಿ ಈ ಬಗೆಯ ವಿಹ್ವಲತೆ ಮೂಡಿದಾಗಲೆಲ್ಲ ಅದು ಧಾನ್ಯಮಾಲಿನಿಯ ಅರಿವಿಗೆ ಬಂದು ಅವನಿಗೆ ಉತ್ತರಿಸಲಾಗದೇ, ಸಾಂತ್ವನ ನೀಡಲಾಗದೇ ಅವಳು ಹನಿಗಣ್ಣಾಗುತ್ತಿದ್ದಳು. ತನ್ನ ಮೇಲೆ ಅತಿಶಯವಾದ ಪ್ರೀತಿಯನ್ನು ಧಾರೆಯೆರೆಯುತ್ತಿದ್ದ ತಂದೆ ರಾವಣನ ಮೇಲೂ ಅತಿಕಾಯನಿಗೆ ಸಿಟ್ಟು ಮಾಡಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಇಂತಹ ಜಿಗುಪ್ಸಾವಹ ಸಂಬಂಧಗಳ ಮಧ್ಯೆ ನವೆಯುತ್ತಿದ್ದ ಅತಿಕಾಯನಿಗೆ ಇದರಿಂದ ವಿಮೋಚನೆ ಬೇಕಾಗಿತ್ತು. ಆ ವಿಮೋಚನೆ ಹೊಂದಲು ಅವನು ತಳೆದ ನಿರ್ಧಾರ ಅತಿಶಯವಾದುದು.

◈ **ಊರ್ಮಿಳೆ:** ರಾಮ ವನವಾಸ ಹೊರಡಬೇಕೆಂದು ನಿಶ್ಚಯವಾದಾಗ ಅಯೋಧ್ಯೆಯಲ್ಲಿ ಆಕ್ರೋಶದಿಂದ ಭುಗಿಲೆದ್ದ ಮೊತ್ತ ಮೊದಲ ವ್ಯಕ್ತಿ ಲಕ್ಷ್ಮಣ. "ಸ್ತ್ರೀಮೋಹ ಪೀಡಿತನಾದ ಈ ಮುದುಕ(ದಶರಥ)ನನ್ನು ಒಂದೇ ಸಲಕ್ಕೆ ಕೊಂದು ಹಾಕಿದರೆ ಅಲ್ಲಿಗೆ ಎಲ್ಲ ಸಮಸ್ಯೆಯೂ ಒಮ್ಮೆಗೇ ಬಗೆಹರಿಯುತ್ತದೆ" ಎಂದು ಗರ್ಜಿಸಿದ್ದ

(ವಾಲ್ಮೀಕಿ ರಾಮಾಯಣ 2.21). ಇಂಥವನನ್ನು ಇಲ್ಲೇ ಬಿಟ್ಟು ತಾನೇನಾದರೂ ಒಬ್ಬನೇ ಕಾಡಿಗೆ ಹೊರಟರೆ ಅಯೋಧ್ಯೆಯಲ್ಲಿ ಇವನಿಂದ ನಿಸ್ಸಂಶಯವಾಗಿ ಕೊಲೆ ರಕ್ತಪಾತಗಳಾಗುತ್ತವೆ ಎಂದು ರಾಮ ಮುಂದಾಲೋಚಿಸಿ ಲಕ್ಷ್ಮಣನನ್ನೂ ತನ್ನೊಂದಿಗೆ ಕರೆದೊಯ್ಯುತ್ತಾನೆ. ನಾನೂ ನಿನ್ನೊಂದಿಗೆ ಕಾಡಿಗೆ ಬರುತ್ತೇನೆಂದು ಸೀತೆ ಹಟ ಮಾಡಿದಂತೆ ಊರ್ಮಿಳೆ ಏಕೆ ಹಟ ಹಿಡಿಯಲಿಲ್ಲ? ಅಥವಾ 'ವನವಾಸ ನಿಗದಿಯಾಗಿರುವುದು ರಾಮನಿಗೆ; ನೀನೇಕೆ ಅವನನ್ನು ಹಿಂಬಾಲಿಸುವೆ?' ಎಂದು ಊರ್ಮಿಳೆ ಗಂಡನಿಗೆ ಏಕಾಂತದಲ್ಲಿ ಕಿವಿಮಾತನ್ನೇನಾದರೂ ಹೇಳಿದಳೇ? ಈ ಯಾವ ಪ್ರಶ್ನೆಗೂ ವಾಲ್ಮೀಕಿ ಉತ್ತರಿಸುವುದಿಲ್ಲ ಎಂದು ಕವಿ ರವೀಂದ್ರರು ತಮ್ಮ 'ಕಾವ್ಯ ಅನಾದರ' ಪ್ರಬಂಧದಲ್ಲಿ ಆಕ್ಷೇಪಿಸುತ್ತಾರೆ. ಕುವೆಂಪು ರವೀಂದ್ರರ ಈ ಪ್ರಶ್ನೆಯಿಂದ ಪ್ರೇರೇಪಿತರಾಗಿ ಕಲ್ದವಸಿಯಾದ ಊರ್ಮಿಳೆಯ ಅನನ್ಯ ಪಾತ್ರವನ್ನು ಚಿತ್ರಿಸಿರಬಹುದು.

◈ **ಅನಲೆ:** ವಿಭೀಷಣನ ಮಗಳಾದ ಅನಲೆಯ ಪಾತ್ರದ ಮೂಲಕ ಮಹಾಕವಿಯು ಮನುಷ್ಯ ಸಂಬಂಧದ ಜಟಿಲತೆ, ನಿಗೂಢಗಳನ್ನು ಪರಿಚಯಿಸಿದ್ದಾರೆ. ರಾವಣನ ಅಂತರಂಗದಲ್ಲಿ ವೈರತ್ವ ಮತ್ತು ಬಂಧುತ್ವಗಳ ನಡುವೆ ಮೇಲಾಟ ಶುರುವಾದಾಗ ಕೊನೆಗೆ ಬಂಧುತ್ವವೇ ಗೆಲುವು ಸಾಧಿಸುವ ಸ್ವಾರಸ್ಯವನ್ನು ಅನಲೆಯ ಪ್ರಸಂಗದಲ್ಲಿ ಕಾಣಬಹುದು. ಜೊತೆಗೆ ಅನಲೆಯ ಪ್ರಸಂಗದಿಂದ ಯುದ್ಧದ ದುರಂತದ ಕಿರುಪರಿಚಯವೂ ಓದುಗನಿಗಾಗುತ್ತದೆ.

ಒಂಬತ್ತು ಅಧ್ಯಾಯಗಳನ್ನು ಒಳಗೊಂಡ ಈ ಪುಸ್ತಕದಲ್ಲಿ ಓದುಗನಿಗೆ ಈ ಒಂಬತ್ತು ಪಾತ್ರಗಳ ಜೀವನ ಚರಿತ್ರೆಯ ಪರಿಚಯವಾಗುವುದಿಲ್ಲ, ಬದಲಾಗಿ ಇವುಗಳ ಚಾರಿತ್ರ್ಯದ ಪೃಥಕ್ ದರ್ಶನವಾಗುತ್ತದೆ. ಈ ಒಂದೊಂದು ಪಾತ್ರವೂ ಒಂದು ಕಾದಂಬರಿಯ ಅಥವಾ ನಾಟಕದ ವಸ್ತುವಾಗುವಷ್ಟು ಸತ್ವಶಾಲಿಯಾಗಿದೆ. ಶಬರಿ, ಊರ್ಮಿಳೆಯಂತಹ ಪಾತ್ರಗಳನ್ನಿಟ್ಟುಕೊಂಡು ಈಗಾಗಲೇ ಕತೆ, ಕಾದಂಬರಿ, ಮಹಾಕಾವ್ಯಗಳ ರಚನೆ ಆಗಿರುವುದೂ ಉಂಟು.

ಎಲ್ಲ ಮಹತ್ವದ ಪ್ರಾಚೀನ ಪಠ್ಯಗಳೂ ಕಾಲ ಸರಿದಂತೆ ಸೂತಕಗೊಳ್ಳುತ್ತವೆ, ಮತ್ತಾವುದೋ ಉದ್ದೇಶ, ಹಿತಾಸಕ್ತಿಗಳಿಗೆ ಎರವಾಗುತ್ತಾ ಹೋಗುತ್ತವೆ. ಹಾಗೆಂದು ಅಂತಹ ಪಠ್ಯಗಳನ್ನು ವಿಸರ್ಜಿಸಲಾಗದು. ಅದು ಪ್ರತಿ ಯುಗಧರ್ಮದಲ್ಲೂ ತತ್ಕಾಲೀನ ಮೌಲ್ಯಗಳಿಗೆ ಅನುಗುಣವಾಗಿ ಹೊಸ ಅವತಾರ ಪಡೆಯುತ್ತಿರುತ್ತದೆ. 'ಶ್ರೀರಾಮಾಯಣ ದರ್ಶನಂ' ನಮ್ಮ ಯುಗಕ್ಕೆ ಪ್ರಾಪ್ತಿಯಾಗಿರುವ ಅಂತಹ ಒಂದು ಭಾಗ್ಯವಾಗಿದೆ. ಇದರ ಕೆಲವು ಮಹತ್ವದ ಪಾತ್ರಗಳು ಈ ಕೃತಿಯಲ್ಲಿ ತಿಳಿಗನ್ನಡ ರೂಪದಲ್ಲಿ ಸಿಗುತ್ತಿರುವುದು ಹೊಸಕಾಲದ ಓದುಗರ ಸೌಭಾಗ್ಯವಾಗಿದೆ.

ಕುವೆಂಪು ಅವರ ಎರಡು ಮಹಾಕಾದಂಬರಿಗಳಲ್ಲಿ ಮಲೆನಾಡ ಬದುಕಿನ ವಿರಾಟ್ ದರ್ಶನವಾದರೆ, 'ಮಲೆನಾಡಿನ ಚಿತ್ರಗಳು' ಕಿರುಹೊತ್ತಗೆಯಲ್ಲಿ ಆ ವಿಸ್ತಾರ ಬದುಕಿನ ಒಂದು ಕಿರುನೋಟ ಓದುಗನಿಗೆ ಲಭಿಸುತ್ತದೆ. ಆ ಕಿರುನೋಟವೇ ಅವರ

ಮಹತ್ಕಾದಂಬರಿಗಳೊಳಗೆ ಪ್ರವೇಶಿಸಲು ಸಹೃದಯನನ್ನು ಪ್ರೇರೇಪಿಸುತ್ತದೆ. ಅಂತೆಯೇ ಡಾ. ಜಿ. ಕೃಷ್ಣಪ್ಪನವರ ಒಂಭತ್ತು ಪಾತ್ರಗಳನ್ನು ಒಳಗೊಂಡ 'ಶ್ರೀರಾಮಾಯಣ ದರ್ಶನಂ ಪಾತ್ರಗಳ ಕಥಾವಳಿ'ಯು ಮಹಾಕಾವ್ಯದ ಒಂದು ಇಣುಕು ನೋಟವನ್ನು ಮತ್ತು ಮಹಾಕಾವ್ಯವನ್ನೋದುವ ಒಂದು ಪ್ರೇರಣೆಯನ್ನು ಓದುಗನಿಗೆ ನೀಡುತ್ತದೆ.

* * *

ಡಾ. ಜಿ. ಕೃಷ್ಣಪ್ಪನವರ ಬೇಂದ್ರೆ ಕಾವ್ಯಾಧ್ಯಯನದ ಬಗ್ಗೆ ಡಾ. ಶಂಕರ ಮೊಕಾಶಿ ಪುಣೇಕರರು ಹೀಗೆ ಬರೆಯುತ್ತಾರೆ: "ಬೇಂದ್ರೆ ಕನ್ನಡವನ್ನು ಪರಿಪರಿಯಾಗಿ ಮಿದ್ದಿ ನಾದಿ ತಮ್ಮ ಕಾವ್ಯಕ್ಕಾಗಿ ಹದಗೊಳಿಸಿದರು. ಎಷ್ಟು ಪರಿಪರಿಯಾಗಿ ಯಥಾರ್ಥವಾಗಿ ಹದಗೊಳಿಸಿದರೆಂಬುದನ್ನು ಅರಿತುಕೊಳ್ಳುವುದಕ್ಕೆ ಡಾ. ಜಿ.ಕೃಷ್ಣಪ್ಪನವರನ್ನು ಓದಬೇಕು. ಆಮೇಲೆಯಷ್ಟೇ ನಾವು ಬೇಂದ್ರೆಯವರನ್ನು ಸರಿಯಾಗಿ ಓದಬಲ್ಲೆವು. ಜಾನಪದ ಭಾಷೆಯನ್ನು ತಮ್ಮ ಅರ್ಥ ವಿಸ್ತಾರಕ್ಕಾಗಿ ಬಳಸಿಕೊಂಡರೆಂಬುದು ಸತ್ಯವೇ. ಹಾಗೆ ಹೇಳಿಬಿಟ್ಟರೆ ನಮಗೇನೂ ಲಾಭವಿಲ್ಲ. ಎಷ್ಟು ಪರಿಯಾಗಿ ಮಿದ್ದಿದರು, ನಾದಿದರು ಎಂಬುದರ ಯಥಾರ್ಥ ಜ್ಞಾನವಾಗಬೇಕಿದ್ದರೆ ಜಿ. ಕೃಷ್ಣಪ್ಪನವರ ಪ್ರಬಂಧಗಳನ್ನು ಓದಬೇಕು. ಆಗ ಬೇಂದ್ರೆಯವರ ಕೃಷಿಯನ್ನು ಸ್ವಲ್ಪಮಟ್ಟಿಗೆ ತಿಳಿದುಕೊಳ್ಳಬಲ್ಲೆವು. ಈ ರೀತಿಯಲ್ಲಿ ಬೇಂದ್ರೆ ವಿಮರ್ಶೆಯಲ್ಲಿ ಜಿ. ಕೃಷ್ಣಪ್ಪನವರಿಗೆ ಅಪೂರ್ವ ಸ್ಥಾನವಿದೆ. ಅವರ ನಿಬಂಧಗಳನ್ನು ಓದುವವರೆಗೆ ನಾನೂ ಬೇಂದ್ರೆಯವರನ್ನು ತಿಳಿದುಕೊಳ್ಳಬಲ್ಲೆ ಎಂಬ ಆತ್ಮಸಂತೋಷದಲ್ಲಿ ಮುಳುಗಿದ್ದೆ. ಈಗ ನನ್ನ ಸ್ವಾಭಿಮಾನಕ್ಕೆ ತೀವ್ರ ಧಕ್ಕೆ ಬಿದ್ದಿದೆ. ಬೇಂದ್ರೆ ಮಹಾಸಾಗರದಂತೆ. ಅದರ ಆಳಕ್ಕೆ ಇಳಿದಷ್ಟೂ ಮುಂದೆ ಇನ್ನೂ ತಿಳಿದುಕೊಳ್ಳುವುದು ಬಹಳಷ್ಟಿದೆ ಎಂಬುವ ಅನುಭವ ಆಗುತ್ತದೆ. ಈ ಹೊಸ ಅತೃಪ್ತಿಯನ್ನು ಹುಟ್ಟಿಸಿದವರು ಜಿ. ಕೃಷ್ಣಪ್ಪ" (ಹೂತsದ ಹುಣಸಿ, ಶ್ರೀರಂಗ ಪ್ರಕಾಶನ, ಮೈಸೂರು, 2000, ಮುನ್ನುಡಿ).

ಕೃಷ್ಣಪ್ಪನವರ ಬಗ್ಗೆ ನಾನು ಇನ್ನೂ ಹೆಚ್ಚಿಗೆ ಏನು ಬರೆದರೂ ಅದು ಅಧಿಕಪ್ರಸಂಗತನವಾಗುತ್ತದೆ. ಆದರೆ ಸಾಹಿತ್ಯದ ವಿದ್ಯಾರ್ಥಿಯಾಗಿ ಅವರಿಂದ ಕಲಿತ ಮಹತ್ವದ ಪಾಠಗಳನ್ನಂತೂ ನಾನು ನಿವೇದಿಸಲೇ ಬೇಕು. ಕಾವ್ಯಗುರು ಕಿ.ರಂ. ನಾಗರಾಜ ತೀರಿಕೊಂಡ ಮೇಲೆ (ಒಬ್ಬ ವ್ಯಕ್ತಿ ತೀರಿಕೊಂಡಾಗಲಷ್ಟೇ ಅವರು ಸೃಷ್ಟಿಸಿದ ಖಾಲಿತನ ಎಂತಹುದೆಂದು ನಮಗರ್ಥವಾಗುವುದು) ನನ್ನಂತಹ ಹಲವಾರು ಸಾಹಿತ್ಯಾಭ್ಯಾಸಿಗಳಿಗೆ ಲಕ್ಷ್ಮೀಶ, ಹರಿಹರ, ಕುವೆಂಪು, ಬೇಂದ್ರೆ ಮುಂತಾದ ಕವಿಗಳನ್ನು ಅಧ್ಯಯನ ಮಾಡಲು ಕೃಷ್ಣಪ್ಪನವರು ನೆರವಾದರು. ಕವಿ ಪ್ರಯೋಗಿಸುವ ಒಂದೊಂದು ಪದವನ್ನೂ ಧ್ಯಾನಿಸುವುದರಿಂದ ಹೇಗೆ ಪದ್ಯದ ನಾನಾ ಅರ್ಥಚ್ಛಾಯೆಗಳು ಅನಾವರಣವಾಗುತ್ತವೆ ಎಂಬುದನ್ನು ನಮಗೆ ಕಲಿಸಿಕೊಟ್ಟರು. 'ಬೇಂದ್ರೆ ಪದನಿರುಕ್ತ' ರಚನೆಯ ಸಂದರ್ಭದಲ್ಲಿ ಅವರು ನನ್ನಿಂದ ಹಾಗೆ ಬೇಂದ್ರೆಯ ನೂರಾರು ಪದ್ಯಗಳನ್ನು ಓದುವ ತಾಲೀಮು ಮಾಡಿಸಿದ್ದಾರೆ. ನನ್ನ ಬರವಣಿಗೆಯ ವ್ಯವಸಾಯದಲ್ಲಿ ಅನುವಾದವೇ ಪ್ರಧಾನವಾದುದು. ಕೃಷ್ಣಪ್ಪನವರ 'ಶ್ರೀರಾಮಾಯಣ

ದರ್ಶನಂ ಪಾತ್ರಗಳ ಕಥಾವಳಿ'ಯೂ ವ್ಯಾಪಕಾರ್ಥದಲ್ಲಿ ಒಂದು ಅನುವಾದ ಕೃತಿಯೇ ಆಗಿರುವುದರಿಂದ ಪ್ರಾಯಶಃ ಅವರು ನನಗೆ ಮುನ್ನುಡಿ ಬರೆಯಲು ಆದೇಶಿಸಿರಬಹುದು ಎಂದು ನಾನು ಭಾವಿಸಿದ್ದೇನೆ.

ಡಾ. ಜಿ. ಕೃಷ್ಣಪ್ಪನವರಂತಹ ಹಲವು ವಿದ್ವಾಂಸರುಗಳ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾಗಿರುವುದು ನನ್ನ ಬದುಕಿನ ಪುಣ್ಯಸಂಚಯಗಳಲ್ಲೊಂದು. ಕೃಷ್ಣಪ್ಪನವರು ಪ್ರೀತಿ ವ್ಯಕ್ತಪಡಿಸುವ ವಿಧಾನ ಒಂದು ಬಗೆಯದ್ದಾಗಿರುವುದಿಲ್ಲ. ಪತ್ರಿಕೆಗಳಲ್ಲಿ ನನ್ನ ಲೇಖನವೋ ಟಿಪ್ಪಣಿಯೋ ಪ್ರಕಟವಾದಾಗ ಫೋನು ಮಾಡಿ ಮೆಚ್ಚುಗೆ ವ್ಯಕ್ತಪಡಿಸುವ ಮೂಲಕ, ತಮ್ಮ ಸಂಗ್ರಹದ ಅಮೂಲ್ಯ ಪುಸ್ತಕಗಳನ್ನು ನನಗೆ ಬಳುವಳಿಯಾಗಿ ನೀಡುವ ಮೂಲಕ, "ಕುಟುಂಬದವರೊಂದಿಗೆ ಆದಷ್ಟೂ ಹೆಚ್ಚು ಹೆಚ್ಚು ಕಾಲವನ್ನು ವಿನಿಯೋಗಿಸು" ಎಂದು ಉಪದೇಶಿಸುವ ಮೂಲಕ ತಮ್ಮ ಪ್ರೀತಿಯನ್ನು ವ್ಯಕ್ತಪಡಿಸುತ್ತಿದ್ದ ಕೃಷ್ಣಪ್ಪನವರು ಇದೀಗ ಮುನ್ನುಡಿ ಬರೆವ ಅವಕಾಶ ನೀಡುವ ಮೂಲಕ ನನ್ನನ್ನು ಹರಸಿದ್ದಾರೆ. ಅವರ ಪ್ರೀತಿಗೆ ಪಾತ್ರನಾಗಿ ಈ ಮುನ್ನುಡಿ ಬರೆಯುತ್ತಿದ್ದೇನಲ್ಲದೇ ಇದನ್ನು ಬರೆಯಲು ಇನ್ನಾವ ಪಾತ್ರತ್ವವೂ ನನಗಿಲ್ಲ.

ಕೃಷ್ಣಪ್ಪನವರು 'ಬೇಂದ್ರೆ ಕೃಷ್ಣಪ್ಪ' ಎಂದು ಜನಜನಿತರಾಗಿದ್ದರೂ ಅವರ ಅಧ್ಯಯನ ಬೇಂದ್ರೆ ಕಾವ್ಯಕ್ಕಷ್ಟೇ ಸೀಮಿತವಾದುದಲ್ಲ. ಅವರು ಹಲವು ದಶಕಗಳಿಂದ ಹಳಗನ್ನಡ ಮತ್ತು ಕುವೆಂಪು ಸಾಹಿತ್ಯವನ್ನು ಅಭ್ಯಾಸ ಮಾಡುತ್ತ ಬಂದಿದ್ದಾರೆ. ಈಚೆಗೆ ಕೆಲವು ವರ್ಷಗಳಿಂದ 'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯವನ್ನು ಗದ್ಯರೂಪದಲ್ಲಿ ಸೃಷ್ಟಿಸುವ ಕೈಂಕರ್ಯದಲ್ಲಿ ತೊಡಗಿದ್ದ ಸಂದರ್ಭದಲ್ಲಿ ಅವರಿಗೆ ಕೊರೋನಾ ಸೋಂಕು ತಗುಲಿತ್ತು. ವಾರಗಟ್ಟಲೆ ಸೋಂಕಿನೊಂದಿಗೆ ಹೋರಾಡಿ ಆಸ್ಪತ್ರೆಯಿಂದ ಯಶಸ್ವಿಯಾಗಿ ಬಿಡುಗಡೆಯಾದರು. ಬರವಣಿಗೆಯಲ್ಲಿ ತೊಡಗಿಕೊಂಡಿದ್ದೂ ಅಂತರಂಗದಲ್ಲೂ ಬಹಿರಂಗದಲ್ಲೂ ದಿನೇ ದಿನೇ ವ್ಯಾಧಿಗ್ರಸ್ತರಾಗುತ್ತಿರುವ ನಮ್ಮ ನಡುವಿನ ಹಲವಾರು ಸಾಹಿತಿಗಳ ಮಧ್ಯೆ ಬೇಂದ್ರೆ ಕೃಷ್ಣಪ್ಪನವರು ಆರೋಗ್ಯಪೂರ್ಣರಾಗಿ ಮರುಜನ್ಮ ಪಡೆದು ಬಂದಿರುವುದು ಒಂದು ಪವಾಡವೇ ಸರಿ. ಮಹಾಕಾವ್ಯದ ಮೇಲಿನ ಅವರ ಶ್ರದ್ಧೆಯೇ ಅವರ ಶರೀರಕ್ಕೆ ಕಾಯಿಲೆಯೊಂದಿಗೆ ಹೋರಾಡುವ ಶಕ್ತಿ ತುಂಬಿತು, ಅಪೂರ್ಣಗೊಂಡಿರುವ ಕಾಯಕವನ್ನು ಪೂರ್ಣಗೊಳಿಸಲು ಅವರನ್ನು ಸಜ್ಜುಗೊಳಿಸಿತು ಎಂಬುದು ನನ್ನ ವೈಯಕ್ತಿಕ ನಂಬಿಕೆ. ನಮ್ಮ ಪರಂಪರೆಯೂ ಈ ನಂಬಿಕೆಯನ್ನು ಅನುಮೋದಿಸುತ್ತದೆ. "ಕಾವ್ಯಾಧ್ಯಯನ ಅಮಂಗಳಕರವಾದುದನ್ನು ದೂರ ಮಾಡುತ್ತದೆ" ಎಂಬ ನಮ್ಮ ಪ್ರಾಚೀನ ಕಾವ್ಯಮೀಮಾಂಸಕರ ಮಾತುಗಳಿಗೆ ಅವರು ಜೀವಂತ ಪ್ರಮಾಣವಾಗಿದ್ದಾರೆ. ಅವರ ಬರವಣಿಗೆ ಅವರನ್ನಷ್ಟೇ ಅಲ್ಲ, ನನ್ನನ್ನೂ ಒಳಗೊಂಡಂತೆ ಅವರ ಅಸಂಖ್ಯ ಓದುಗರನ್ನು ಈತನಕ ಸ್ವಸ್ಥರನ್ನಾಗಿ ಇರಿಸಿದೆ. ಈ ಕೃತಿಯ ಮೊದಲ ಓದುಗನಾಗಿ ಇವಿಷ್ಟು ಮಾತುಗಳನ್ನು ಮಾತ್ರ ನಾನು ಹಂಚಿಕೊಳ್ಳಬಲ್ಲೆ. ಈ ಅವಕಾಶ ನೀಡಿದ ಅವರಿಗೆ ನಾನು ಚಿರಋಣಿಯಾಗಿದ್ದೇನೆ.

**– ಟಿ.ಎನ್. ವಾಸುದೇವಮೂರ್ತಿ**

## ಲೇಖಕರ ನುಡಿ

ಮಹಾಕವಿ ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯವನ್ನು ಹಲವಾರು ವರ್ಷಗಳಿಂದ ಅನೇಕ ಸಲ ಓದಿ ಆನಂದಪಟ್ಟಿದ್ದೇನೆ. ಅಲ್ಲಿಯ ಪಾತ್ರಗಳು ಕವಿಯ ವಿಶಿಷ್ಟ ಪ್ರತಿಭೆಯಲ್ಲಿ ಅದ್ವಿತೀಯವಾಗಿ ಮರುಹುಟ್ಟು ಪಡೆದಿವೆ. ಅವುಗಳಲ್ಲಿ ಒಂಭತ್ತು ಪಾತ್ರಗಳನ್ನು ಕಥೆಯಾಗಿ ರಚಿಸಿದ್ದೇನೆ. ಮೂಲವನ್ನು ಪೂರ್ಣವಾಗಿ ಅನುಕರಿಸಿ ಕಥಾ ಓಟಕ್ಕಾಗಿ ಅಲ್ಲಲ್ಲಿ ಸ್ವಲ್ಪ ಬದಲಾವಣೆಯನ್ನು ಮಾಡಿದ್ದೇನೆ. 'ಊರ್ಮಿಳೆ' ಕಥಾ ಪ್ರಾರಂಭ ಮಾತ್ರ ನನ್ನ ಕಲ್ಪನೆಯಾಗಿದೆ. ಈ ಪಾತ್ರಗಳು ಅಂತಃಕರಣವನ್ನು ಮಿಡಿದು ವಿವೇಕವನ್ನು ಜಾಗೃತಗೊಳಿಸುತ್ತವೆ.

ಇಲ್ಲಿ ನಾನು ಆಯ್ಕೆ ಮಾಡಿಕೊಂಡಿರುವ ಪಾತ್ರಗಳು ತಮ್ಮ ಇತಿಮಿತಿ, ದೋಷಗಳನ್ನು ತಿಳಿದಿವೆ. ಅವು ತಮ್ಮನ್ನು ಆತ್ಮ ಶೋಧಕ್ಕೆ ಒಳಪಡಿಸಿಕೊಂಡಂತೆ ಅವುಗಳ ಆಧ್ಯಾತ್ಮಿಕತೆ ಮತ್ತು ಆತ್ಮಶ್ರೀ ಬೆಳೆಯುವುದನ್ನು ಕಾಣುತ್ತೇವೆ. 'ಬೆಳೆಯುವುದೆಲ್ಲ ಮನಃಶಾಸ್ತ್ರದ್ದು; ಹೊಳೆಯುವುದೆಲ್ಲ ಕಾವ್ಯದ್ದು' ಎಂಬ ಕುವೆಂಪು ಅವರ ನುಡಿಯಂತೆ ಇಲ್ಲಿಯ ಮಂಥರೆ, ಶಬರಿ ಪಾತ್ರಗಳು ರೂಪುಗೊಂಡು ಕಾವ್ಯ ಭಾವಸತ್ಯದ ಪ್ರಕಾಶವಾಗಿವೆ.

'ಆಧ್ಯಾತ್ಮಿಕವಾಗಿ ಪುರುಷನಿಗಿಂತ ಸ್ತ್ರೀ ಹೆಚ್ಚು ವಿಕಾಸಗೊಂಡಿದ್ದಾಳೆಂದೇ ನನ್ನ ಭಾವನೆ' ಎಂದು ಕುವೆಂಪು ಹೇಳಿದ್ದಾರೆ. ಅದಕ್ಕೆ ಸಾಕ್ಷಿಯಾಗಿ ಸೀತೆ, ಮಂಥರೆ, ಶಬರಿ, ಮಂಡೋದರಿ, ಊರ್ಮಿಳೆ, ಅನಲೆ ಪಾತ್ರಗಳು ವಿಕಾಸಗೊಂಡಿವೆ. 'ಅನಲೆ' ಕುವೆಂಪು ಅವರ ಮನದಲ್ಲಿ ಸೃಷ್ಟಿಗೊಂಡ ರಾಮಾಯಣ ಕಥೆಯ ಹೊಸ ಪಾತ್ರ. ಈ ಸ್ತ್ರೀ ಪಾತ್ರಗಳು ಆತ್ಮಶಕ್ತಿ ಸಂಚಯದಂತಿವೆ.

‘ಜೀವಂಗಳಂ ಮಸೆಯಲ್ಕೆ, ನಿಶಿತಗೊಳಿಸಲ್ಕೆ,
ಬೆಳಗಲ್ಕೆ ದುಃಖಭೋಗಂ ತಾಂ ಸಾಣೆಯಲ್ತೆ?’

ಎಂಬ ಅವರ ನುಡಿಯ ಹಲವು ಆಯಾಮಗಳ ದರ್ಶನದಂತೆ ವಾಲಿ, ಮಾರೀಚ, ಅತಿಕಾಯ ಪಾತ್ರಗಳಿವೆ. ‘ಭಗವದರ್ಪಿತಮಾಗೆ, ಸಾವುದುಂ ಬರ್ದುಕುವೋಲ್ ಶ್ರೇಯಸ್ಕರಂ’ ಎಂಬ ಅವರ ಮಾತಿನ ಪ್ರತಿಬಿಂಬದಂತಹ ಪಾತ್ರ ‘ಮಹಾಪಾರ್ಶ್ವ’. ಅವನ ಭಕ್ತಿ, ಶ್ರದ್ಧೆ, ಸತ್ಯಾಭಿವ್ಯಕ್ತಿ, ಸ್ವಾಮಿನಿಷ್ಠೆ ಅದ್ವಿತೀಯವಾದುದು.

‘ಶ್ರೀ ರಾಮಾಯಣದರ್ಶನಂ’ ಮಹಾಕಾವ್ಯದ ಪಾತ್ರಗಳನ್ನು ಕಥೆಯಾಗಿ ಬರೆಯಲು ಅನುಮತಿ ನೀಡಿ ಪ್ರೋತ್ಸಾಹಿಸುತ್ತಿರುವ ಶ್ರೀಮತಿ ತಾರಿಣಿ ಚಿದಾನಂದಗೌಡ ಅವರಿಗೆ ನನ್ನ ನಮನಗಳು. ‘ಮಂಥರೆ’ ಕಥೆಯನ್ನು ಇಂಗ್ಲಿಷಿಗೆ ಅನುವಾದಿಸಿರುವ ಡಾ. ಸಿ.ಎನ್. ಶ್ರೀನಾಥ್ ಮತ್ತು ತೆಲುಗಿಗೆ ಅನುವಾದಿಸಿರುವ ಶ್ರೀ ವೇಲೂರಿ ಕೃಷ್ಣಮೂರ್ತಿ ಅವರಿಗೆ ನನ್ನ ನಮನಗಳು. ಮಂಥರೆ, ಅತಿಕಾಯ, ವಾಲಿ ಕಥೆಗಳನ್ನು ಪ್ರಕಟಿಸಿದ ಸುಧಾ, ಸಂಯುಕ್ತ ಕರ್ನಾಟಕ, ಸಿಹಿಗಾಳಿ ಪತ್ರಿಕೆಯ ಸಂಪಾದಕರುಗಳಿಗೆ ಧನ್ಯವಾದಗಳು.

ಈ ಕಥೆಗಳನ್ನು ಬರೆದನಂತರ ಇದಕ್ಕೆ ಸೂಕ್ತ ಶೀರ್ಷಿಕೆ ನೀಡಿ ಎಂದು ಆಚಾರ್ಯ ಮಲ್ಲೇಪುರಂ ಜಿ. ವೆಂಕಟೇಶ ಅವರನ್ನು ಕೇಳಿಕೊಂಡೆನು. ಅವರು ಈ ಬಗೆಯ ಪ್ರಯತ್ನ ಹೊಸತು, ಇದಕ್ಕೆ ‘ಶ್ರೀರಾಮಾಯಣದರ್ಶನಂ ಪಾತ್ರಗಳ ಕಥಾವಳಿ’ ಎಂದು ಹೆಸರಿಡಿ ಎಂದು ಹೇಳಿದರು. ಅದಕ್ಕಾಗಿ ಅವರಿಗೆ ನನ್ನ ಧನ್ಯವಾದಗಳು. ಈ ಕಥಾವಳಿಗೆ ಮುನ್ನುಡಿ ಬರೆದುಕೊಡಿ ಎಂದು ನನ್ನ ನಲ್ಮೆಯ ಸ್ನೇಹಿತ, ‘ರಾಮಾಯಣ ಒಂದು ಹೊಸ ಓದು’ ಅನುವಾದ ಕೃತಿ ರಚಿಸಿರುವ (ಮೂಲ: ಎನ್.ಆರ್. ನವಲೇಕರ್), ಸಮದರ್ಶಿ ಸಾಹಿತಿ ಡಾ. ಟಿ.ಎನ್. ವಾಸುದೇವ ಮೂರ್ತಿ ಅವರನ್ನು ಕೇಳಿಕೊಂಡೆನು. ಅವರು ಮೌಲಿಕ ಮುನ್ನುಡಿ ಬರೆದುಕೊಟ್ಟಿದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು.

ಈ ಕೃತಿಗೂ ಮೊದಲು ‘ಕುವೆಂಪು ಹನುಮದ್ದರ್ಶನ’ ಎಂಬ ಯೋಗಿ ಆಂಜನೇಯನ ಸಮಗ್ರ ಚಿತ್ರಣವನ್ನು ಒಂದು ನೀಳ್ಗತೆಯಾಗಿ ಬರೆದನು. ಅದನ್ನು ಶ್ರೀ ಎಂ. ನರಸಿಂಹ, ಸಂಸ್ಥಾಪಕ ಗೌರವ ಕಾರ್ಯದರ್ಶಿ ಉದಯಭಾನು ಕಲಾಸಂಘ ಬೆಂಗಳೂರು ಅವರು ಓದಿ ಸಂಘದಿಂದ ಪ್ರಕಟಣೆ ಮಾಡಿ ಪ್ರೋತ್ಸಾಹಿಸಿದರು. ಅವರ ಮತ್ತು ಸಂಘದ ಪದಾಧಿಕಾರಿಗಳ ಪ್ರೀತಿ ವಿಶ್ವಾಸಕ್ಕೆ ನಾನು ಋಣಿಯಾಗಿರುವೆನು.

2014ರಲ್ಲಿ ಜಯದೇವ ಹೃದ್ರೋಗ ಆಸ್ಪತ್ರೆಯಲ್ಲಿ ನನಗೆ ತೆರೆದ ಹೃದಯ ಶಸ್ತ್ರಚಿಕಿತ್ಸೆ ಮಾಡಿ ಮರುಜೀವ ನೀಡಿದವರು ಡಾ. ಸೀತಾರಾಮ ಭಟ್ ಪಿ.ಎಸ್. ಅವರಿಗೆ ಮತ್ತು ಅವರ ಧರ್ಮಪತ್ನಿ ಶ್ರೀಮತಿ ಡಾ. ನಿರ್ಮಲ ಎಸ್. ಭಟ್ ಅವರಿಗೆ ಈ ಕೃತಿಯನ್ನು ಅರ್ಪಿಸಿದ್ದೇನೆ. ಇದನ್ನವರು ಪ್ರೀತಿಯಿಂದ ಸ್ವೀಕರಿಸಬೇಕೆಂದು ಪ್ರಾರ್ಥಿಸುತ್ತೇನೆ.

ನನ್ನ ಸಾಹಿತ್ಯಾಧ್ಯಯನಕ್ಕೆ ತುಂಬು ಪ್ರೋತ್ಸಾಹ ನೀಡುತ್ತಿರುವ ಗುರು ಡಾ. ಕೆ. ಅನಂತರಾಮು, ಪ್ರೊ॥ ಮಲ್ಲೆಪುರಂ ಜಿ. ವೆಂಕಟೇಶ, ಶ್ರೀ ಎಂ. ನರಸಿಂಹ, ಶ್ರೀ ಕೆ.ಎನ್. ಶಾಂತಕುಮಾರ್, ಶ್ರೀ ಬಿ.ಎಂ. ಹನೀಫ್, ಶ್ರೀ ಚ.ಹ. ರಘುನಾಥ, ಶ್ರೀರಾಜು ಮಳವಳ್ಳಿ, ಪ್ರೊ॥ ಭೈರಮಂಗಲ ರಾಮೇಗೌಡ, ಡಾ. ವಿ. ಚಂದ್ರಶೇಖರನಂಗಲಿ, ಡಾ॥ ಕೆ.ಎಸ್. ನರಸಿಂಗರಾವ್, ಪ್ರೊ॥ ಸಿ.ಪಿ. ನಾಗರಾಜ ಡಾ. ಸಿ. ನಾಗಣ್ಣ ಶ್ರೀ ಎಚ್.ಎಲ್. ನಾಗರಾಜ ಅಸಿಸ್ಟೆಂಟ್ ಕಮೀಷನರ್, ಪ್ರೊ॥ ಶಿವರಾಮಯ್ಯ, ಕವಯಿತ್ರಿ ಜ.ನಾ. ತೇಜಶ್ರೀ, ಪ್ರೊ॥ ಕೆ.ಎಸ್. ಭಗವಾನ್, ಪ್ರೊ॥ ಬಿ. ಜಯಪ್ರಕಾಶಗೌಡ, ಶ್ರೀ ಬಿ.ಎಸ್. ಜಯಪ್ರಕಾಶ ನಾರಾಯಣ, ಶ್ರೀ ಯು.ಎನ್. ಸಂಗನಾಳಮಠ, ಡಾ. ಎ.ಕೆ. ರವಿಶಂಕರ, ಶ್ರೀ ಡಿ.ಎಚ್. ಪುಟ್ಟರಾಮು, ಶ್ರೀ ಬಿ.ಎಚ್. ವಿಶ್ವನಾಥ್, ಶ್ರೀ ನಂ. ನಂಜಪ್ಪ ಮುಂತಾದವರುಗಳಿಗೆ ಮತ್ತು ನಮ್ಮ ದ.ರಾ. ಬೇಂದ್ರೆ ಕಾವ್ಯಕೂಟದ ಎಲ್ಲ ಸದಸ್ಯರಿಗೆ ನನ್ನ ನಮನಗಳು.

ನನ್ನ ಸಾಹಿತ್ಯ ಅಧ್ಯಯನಕ್ಕೆ ತುಂಬು ಉತ್ತೇಜನ ನೀಡುತ್ತಿರುವ ನನ್ನ ಪತ್ನಿ, ಮಕ್ಕಳು, ಅಳಿಯಂದಿರು ಮತ್ತು ಸೊಸೆಯನ್ನು ನೆನೆಯುವುದು, ಪ್ರೀತಿಯ ಮೊಮ್ಮಕ್ಕಳಾದ ಚಿ॥ ಎಂ. ಉಜ್ವಲ್, ಚಿ॥ ಜೆ. ಸುಜನ, ಕು॥ ಜೆ. ಸುಗ್ಗಿ, ಚಿ॥ ಬಿ.ಎಸ್. ಸಂವಿತ್‌ಕೃಷ್ಣ ಅವರ ಮುಗ್ಧ ಆನಂದಕ್ಕೆ ನಲಿಯುವುದು ನನ್ನ ಕುಟುಂಬ ಸಾಹಿತ್ಯ ಪೋಷಕ ವಾತಾವರಣದ ಆಹ್ಲಾದ.

ಈ ಮಹಾಕಾವ್ಯವನ್ನು ಅಕ್ಷರ ವಿನ್ಯಾಸ ಮಾಡಿದ ಅಭಿನವ ಕ್ರಿಯೇಷನ್ಸ್‌ನವರಿಗೂ ಹಾಗೂ ಮುಖಪುಟ ಮಾಡಿಕೊಟ್ಟ ಅಜಿತ್ ಕೌಂಡಿನ್ಯ ಅವರಿಗೆ ಮತ್ತು ಅಂದವಾಗಿ ಮುದ್ರಿಸಿದ ಲಕ್ಷ್ಮಿ ಮುದ್ರಣದವರಿಗೆ ಮತ್ತು ಪ್ರಕಾಶಕರಾದ ಶ್ರೀ ಪ್ರಕಾಶ್, ವಂಶಿ ಪ್ರಕಾಶನದವರಿಗೂ ಮನಃಪೂರ್ವಕ ನಮನಗಳು.

ನಾನು ಈ ಮೊದಲು ರಚಿಸಿರುವ ಕೃತಿಗಳನ್ನು ಓದಿ ಸವಿದ ಕನ್ನಡ ಸಾಹಿತ್ಯಾಸಕ್ತರು ಮತ್ತು ವಿದ್ವನ್ಮಣಿಗಳು ಈ ಕೃತಿಯನ್ನು ಪ್ರೀತಿಯಿಂದ ಸ್ವೀಕರಿಸಿ ಆಶೀರ್ವದಿಸಬೇಕೆಂದು ಪ್ರಾರ್ಥಿಸುತ್ತೇನೆ.

**8–1–2021** — ಡಾ. ಜಿ. ಕೃಷ್ಣಪ್ಪ

# ಪರಿವಿಡಿ

1

# ಮಂಥರೆ

ಒಂದು ಹುಣ್ಣಿಮೆಯ ರಾತ್ರಿ ಮಗು ರಾಮಚಂದ್ರನು ಆಗಸದ ಚಂದ್ರನನ್ನು ನೋಡುತ್ತಾನೆ. ಅದಕ್ಕೆ ಆಸೆ ಪಡುತ್ತಾನೆ. ಅದು ತನಗೆ ಬೇಕೆಂದು ತಾಯಿ ಕೌಸಲ್ಯೆಯನ್ನು ಕಾಡುತ್ತಾನೆ. ನಭದ ಚಂದ್ರ ನರರ ಧರಣಿಗೆ ಬರುವುದಿಲ್ಲ ಎಂದು ತಾಯಿ ಪರಿಪರಿಯಾಗಿ ಹೇಳುತ್ತಾಳೆ. ಆದರೆ ಮಗು ಹಠ ಹಿಡಿದು ರೋದಿಸುತ್ತದೆ. ತಂದೆ ದಶರಥನು ಸಮಾಧಾನ ಪಡಿಸಲು ಪ್ರಯತ್ನಪಟ್ಟು ಸೋಲುತ್ತಾನೆ. 'ಶಿವ, ಶಿವಾ! ಭೂ ಮಂಡಲಕ್ಕೆ ಅರಸನಾದರೇನು? ಒಂದು ಕೂಸಿನ ಬಯಕೆ ತೀರಿಸಲಾರದಷ್ಟು ಬಡವಾಯಿತಲ್ಲ!' ಎಂದು ಮಗುವಿನ ಆಸೆ ಈಡೇರಿಸಲಾಗದುದಕ್ಕೆ ಕಳವಳಗೊಳ್ಳುತ್ತಾನೆ.

ಆಗ ಅಲ್ಲಿಗೆ ಬೆಪ್ಪಾಗಿ ಕಾಣುವ ಮುದುಕಿಯೊಬ್ಬಳು ಮಗು ಭರತನನ್ನು ಕಂಕುಳಲ್ಲಿರಿಸಿಕೊಂಡು ಬಂದಳು. ಕೈಕೆಯನ್ನು ಹೊರತುಪಡಿಸಿ ಅಲ್ಲಿದ್ದ ರಾಣಿ ವಾಸದವರು ಅವಳನ್ನು ಕಂಡ ತಕ್ಷಣ ಅಮಂಗಳವನ್ನು ಈಕ್ಷಿಸಿದಂತೆ ಮುಖ ತಿರುಗಿಸಿದರು. ಮಾತು ನಿಲ್ಲಿಸಿದರು. ಅವರು ದೂರ ಸರಿವ ವರ್ತನೆಗೆ ಕಾರಣವಾದ ಆ ಮುದುಕಿ ಹೀಗಿದ್ದಳು:

ಅವಳ ವಿಕಾರ ಶರೀರವು ಬಿಲ್ಲಿನಂತೆ ಬಾಗಿತ್ತು. ಮೈಯನ್ನು ತೊನ್ನಿನ ಬಿಳಿಯ ಕಲೆ ಆವರಿಸಿತ್ತು. ಗೂನು ಬೆನ್ನು ಗೂಳಿಯ ಡುಬ್ಬದಂತಿತ್ತು. ಬತ್ತಿ ಹೋದ ಚರ್ಮ ನಿರಿನಿರಿಯಾಗಿತ್ತು. ಹಲ್ಲುದುರಿ ಬೋಡಾದ ಬೊಚ್ಚು ಬಾಯಿ. ಕುಳಿಬಿದ್ದ ಕೆನ್ನೆಯಿಂದ ಅವಳು ಅಸ್ಥಿಪಂಜರದಂತಿದ್ದಳು.

ತನ್ನನ್ನು ತಾಯಿಯಂತೆ ಸಾಕಿ ಸಲಹಿದ ಈಗ ಭದ್ರವಾಗಿ ಹೆಜ್ಜೆ ಊರಿ ನಡೆಯಲಾಗದ ಆ ಮಂಥರೆಯ ಬಳಿಗೆ ಕೈಕೆ ಹೋದಳು. ಎಲ್ಲರೂ ನೋಡುತ್ತಿರಲು ಆ ವೃದ್ಧೆಯ ಮಾತನ್ನು ಆಲಿಸಲು ಕೈಕೆ ಬಾಗಿದಳು. ಆಗ ಅವಳ ಕಿವಿಯಲ್ಲಿ ಏನೋ ಹೇಳಿ, ಆ ಹಿರಿಜೀವ ತನ್ನ ಮಡಲಿನಿಂದ ಒಂದು ಕನ್ನಡಿಯನ್ನು ತೆಗೆದು ನೀಡಿತು. ಕೈಕೆ ನಗುತ್ತ ಹೋಗಿ ದೊರೆಯ ತೋಳುಗಳಲ್ಲಿ ಅಳುತ್ತಿದ್ದ ರಾಮನಿಗೆ ಅದನ್ನು ತೋರಿಸಿದಳು. ಕನ್ನಡಿಯಲ್ಲಿ ಬಾನಿನ ಚಂದ್ರ ಹೊಳೆದು ಕಂಡಿತು. ಅದನ್ನು ಮಗು ಮುಟ್ಟಿತು. ತಾನು ಹಿಡಿದೆ ಎಂದು ಕುಣಿಕುಣಿದು ನಲಿಯಿತು. ಅಲ್ಲಿದ್ದವರೆಲ್ಲರೂ ದಿಗ್ಭ್ರಮೆಗೊಂಡರು.

ಸಂತಸಗೊಂಡ ಮುದಿಗೂನಿ ದಾಸಿಯು ರಾಮನನ್ನು ಮುದ್ದಿಸಲು ಬಯಸಿ ಕೈ ಚಾಚಿದಳು. ಆಗ ಕೌಸಲ್ಯೆ 'ಕಂದನಿಗೆ ಅಮಂಗಳವಾಗುತ್ತದೆ. ಮುಟ್ಟಬೇಡ' ಎಂದು ಹೇಳಿದಳು. ಮಂಥರೆಯ ಮೈತ್ರಿ ಶಿಥಿಲವಾಗಿ ಚೂರು ಚೂರಾಗುವಂತೆ ತಡೆದಳು.

ಮಂಥರೆಯ ಪ್ರೀತಿ ಮುರಿಯಿತು. ಅವಮಾನವಾಯಿತು. ಭರತನನ್ನು ಅಪ್ಪಿಕೊಂಡು ಅಲ್ಲಿ ನಿಲ್ಲದೆ ಹೊರಟು ಹೋದಳು. ಆ ಕೋಪದ ಉರಿಯ ಹೊಗೆಯಲ್ಲಿ ಆಕೆಗೆ ತಾನು ಕೇಳಿದ ಅನಾಥ ಶಿಶುವಿನ ಘಟನೆ ನೆನಪಾಯಿತು. ಕಣ್ಣು, ಮೈ ಮನಸು ಮಂಜಾಯಿತು.

* * *

ಒಂದು ದಿನ ಕೈಕೆಯ ತಂದೆ ಕೇಕಯ ರಾಜನು ಬೇಟೆಯಾಡಿ ಆಯಾಸದಿಂದ ಸಂಜೆ ಹಿಂದಿರುಗುತ್ತಿದ್ದನು. ಆಗ ಆ ಕಾಡಿನಲ್ಲಿ ಕಾಡೇ ರೋದಿಸುವಂತೆ ಒಂದು ಮಗು ಅಳುತ್ತಿತ್ತು. ಅವನಲ್ಲಿ ಕರುಣೆ ಉದಿಸಿತು. ಹೋಗಿ ನೋಡುತ್ತಾನೆ ಒಂದು ದಸ್ಯು ಶಿಶು ಮುಳ್ಳು ಮಣ್ಣು ತರಗೆಲೆಯಿಡಿದ ನೆಲದ ಮೇಲೆ ಇರುವೆ ಮುತ್ತಿ ಅರಚುತ್ತಿದೆ. ಅಯ್ಯೋ, ಅದು ವಿಕೃತ ವಕ್ರತೆ ರೂಪುಗೊಂಡಂತಿದೆ! ಹೆತ್ತವರ ಸುಳಿವಿಲ್ಲದ ಆ ಹೆಣ್ಣು ಮಗುವನ್ನು ಕರುಣಾಳು ದೊರೆ ಹಿಡಿದು ಎತ್ತಿಕೊಂಡನು. ಕಟ್ಟಿರುವೆಗಳನ್ನು ಜಾಡಿಸಿದನು. ಕೂಸನ್ನು ಸಮಾಧಾನಪಡಿಸಿದನು. ತಂದೆಯ ಪ್ರೀತಿ ವಾತ್ಸಲ್ಯವನ್ನು ಹರಿಸಿದನು.

ಅದು ಕುಳ್ಳಾಗಿ, ಗೂನಾಗಿ, ಕರ‍್ರಗೆ ಜನರ ಕಣ್ಣಿಗೆ ಹೇಸಿನಾಕೃತಿಯಾಗಿ ಬೆಳೆಯಿತು. ಕೇಕಯ ರಾಜನು ಆ ಮಗುವನ್ನು ಚೆನ್ನಾಗಿ ನೋಡಿಕೊಳ್ಳಿ ಎಂದು ಕಟ್ಟಾಜ್ಞೆ ವಿಧಿಸಿದ್ದನು. ಆದರೂ ಅವನ ಆಜ್ಞೆಯನ್ನು ಕಡೆಗಣಿಸಿ ಕಂಡ ಕಂಡವರೆಲ್ಲರೂ ಆ ಮ್ಲೇಚ್ಛ ಕುಳ್ಳನೆಯ ತಂದೆತಾಯಿಯಿಲ್ಲದ ಪರದೇಶಿ ಕನ್ನೆಯನ್ನು ಚಿಃ ಎಂದು, ತೊಲಗೆಂದು, ಥೂಯೆಂದು, ನಾಯಿಮರಿಗೂ ಕಡೆಯಾಗಿ ಕಂಡು ನಡೆದುಕೊಂಡರು. ಮನುಜರ ಪ್ರೀತಿಯ ತುಸು ಸವಿಯನ್ನೂ ಕಾಣದೆ ಮೃಗದ ರೀತಿ ಬೆಳೆದು ಮಿದುಳು ವಿಕಾಸವಾಗದೆ ಜಡವಾಗಿ ಸೋಮಾರಿಯಾಯಿತು. ಅವಳನ್ನು ಜರೆದು, ಬಯ್ದು ಅವಳ ಮುಖಕ್ಕೆ ಮಸಿ ಬಳಿಯುವಂತೆ ಮಂಥರೆ ಎಂದು ಹೆಸರಿಸಿದರು. ಆ ಜನರ ಮನದ ವಿಕೃತಿಯ ಕನ್ನಡಿಯ ಪ್ರತಿಬಿಂಬವೆಂಬಂತೆ ಅವಳ ಮೈ ವಿಡಂಬನೆಗೆ ಒಳಗಾಗುವಂತೆ ಬೆಳೆಯಿತು.

ಕಾಲದ ಹೊಳೆಹರಿದು ಸಾಗಿತು. ನಿಂದೆಯಲ್ಲಿ ಬೆಳೆದ ಕುಬ್ಜೆಯು ದೊಡ್ಡವಳಾದಳು. ಕೇಕಯ ರಾಜ ಸತಿಗೆ ಕೈಕೆ ಪುತ್ರಿ ಹುಟ್ಟಿದಳು. ತಾನು ಕನಿಕರಿಸಿ ತಂದ ಮಂಥರೆಗೆ ಅರಮನೆಯಲ್ಲಿ ಯಾರಿಂದಲೂ ಕರುಣೆ ಪ್ರೀತಿ ದೊರಕದ್ದನ್ನು ಕಂಡು ರಾಜ ಲೋಕದ ಜನರ ವರ್ತನೆಗೆ ಅಚ್ಚರಿಗೊಂಡನು. ಅವಳ ಒಂಟಿತನ ಅವನ ಮರುಕದ ಮನವನ್ನು ಸದಾ ಕಾಡುತ್ತಿತ್ತು. ಆ ಭೀಷಣ ಏಕಾಂತತೆಯನ್ನು ದೂರವಾಗಿಸಲು ಅವಳನ್ನು ತನ್ನ ಮುದ್ದು ಮಗುವನ್ನು ಆಡಿಸುವ ಕೆಲಸಕ್ಕೆ ನೇಮಿಸಿದನು.

ಅದು ಮಂಥರೆಯ ಮರಳುಗಾಡಿನ ಬಾಳಿಗೆ ಮಳೆ ಹೊಯ್ದಂತಾಯಿತು. ಅವಳು ಅದುವರೆಗು ಒಂಟಿತನದಿಂದ ಬಿಗಿ ಹಿಡಿದು ಬಾಡಿದಂತಿದ್ದ ಶಿಶಿರಕಾಲ ಕಳೆದು ಚೈತ್ರನಾಗಮನವಾಯ್ತು. ಅವಳ ಬಾಳಿನ ರಾತ್ರಿಯಲ್ಲಿ ಶಶಿ ಉದಯಿಸಿದಂತಾಯಿತು. ಅವಳ ಮೃತ್ಯುವಿಗೆ ಅಮೃತ ಸೇಚನೆಯಾಯಿತು. ರಾಜಕುವರಿ ಕೈಕೆಯ ಪ್ರೇಮ ಸೌಂದರ್ಯ ಮಹಿಮೆಯಿಂದ ಅವಳ ಒಂಟಿತನದ ಶುಷ್ಕ ಶೂನ್ಯತೆಯಲ್ಲಿ ಪ್ರೀತಿ ಸಂಚರಿಸಿತು. ಬದುಕು ಮಧುರವಾಗಿ ಸಾರ್ಥಕವಾಯಿತು. ರೂಪ ವಿಹೀನೆಯಾದ ಅವಳು ರೂಪವೇ ಮೈವೆತ್ತಕೂಸನ್ನು ಮುದ್ದು ಮಾಡಿ ತೂಗಾಡಿದಳು. ಹಾಲಿನಲ್ಲಿ ಇದ್ದಲಿನ ಚೂರು ತೇಲುವಂತೆ ಅದರ ಚೆಲುವಿನಲ್ಲಿ ತೊನೆದಾಡಿದಳು. ಕಾಳಸರ್ಪದ ಹೆಡೆಯಲ್ಲಿ ಹೊಳೆಯುವ ಮಣಿಯಂತೆ ಮಂಥರೆಯ ತೊಡೆಯಲ್ಲಿ ಕೈಕೆ ಮೆರೆದಳು.

ಚಕ್ಕಮಕ್ಕಿ ಕಲ್ಲಿನ ಆಂತರ್ಯದಲ್ಲಿ ಅಗ್ನಿ ಗುಪ್ತವಾಗಿರುವಂತೆ – ಬಾಹ್ಯ ವಿಕೃತಿಯ ಮಧ್ಯೆ ಮಂಥರೆಯ ಹೃದಯದಲ್ಲಿ ಸುಪ್ತವಾಗಿದ್ದ ಚೆಲುವು ಒಲವುಗಳ ಚಿಲುಮೆ ಒಮ್ಮೆಲೇ ಕಣ್ದೆರೆಯಿತು. ದಡಕ್ಕನೆ ಮುತ್ತಿನಹಾರ ಹರಿದು ಚೆಲ್ಲಾಡಿ ಫಳಫಳಿಸುವಂತೆ ಅವಳ ಆನಂದ ಚಿಮ್ಮಿ ಹರಿಯಿತು. ಅವಳ ಜೀವಿತಕ್ಕೆ ರಾಜ ಪುತ್ರಿಯೆ ಸರ್ವಸುಖವಾದಳು. ಆಗ ಆಕೆ ತನಗಾಗಿದ್ದ ಅನ್ಯಾಯ ಅಪಮಾನವನ್ನು ಮರೆತಳು. ಜೊತೆಗೆ ಕೈಕೆಯ ಅನೋನ್ಯ ಸಂಯೋಗದಲ್ಲಿ ತನ್ನನ್ನು ತಾನೇ ಮರೆತಳು!

ಮಂಥರೆ ಈ ರೀತಿ ಬದುಕುತ್ತಿರಲು ಅಚ್ಚರಿಯೆಂಬಂತೆ ಅವಳ ಬಾಲ್ಯ, ಕೌಮಾರ್ಯ, ಯೌವ್ವನಗಳು ಕಳೆದು ಹೋದವು. ಕೂದಲು ನೆರೆಯಿತು. ದೇಹಕ್ಕೆ ಸುಕ್ಕಡರಿತು. ಹೊರಮೈಯ ವಿಕೃತಿ ಹೆಚ್ಚುತ್ತಿದ್ದಂತೆ ಅವಳಿಗೆ ಕೈಕೆಯ ಮೇಲಿನ ಮಮತೆ ನೂರ್ಮಡಿಯಾಯಿತು.

* * *

ಕೈಕೆಯು ನರ ತಿರಸ್ಕೃತೆ ವಿಕೃತೆ ಮಂಥರಾ ದಾಸಿಯನ್ನು ಶೈಶವ ಕೃತಜ್ಞತಾ ಪ್ರೇಮದಿಂದ ಪ್ರೀತಿಸುತ್ತಿದ್ದಳು. ಅವಳು ಮನ್ಮಥನ ಹೊಸ ಕಾಂತಿಯ ಹೊಳೆಹೊಳೆವ ಪುಷ್ಪದಂತೆ ಯೌವನ ಭರಿತಳಾದಳು. ಅವಳ ಲೋಕ ಮೋಹಕ ಸೊಬಗಿನ ಸುಳಿಗೆ ದಶರಥ ಸಿಕ್ಕಿಕೊಂಡನು. ಅವಳನ್ನು ಮದುವೆಯಾದನು. ಆಗ ಅವಳ ನೆರಳಿನಂತೆ ದಾಸಿ ಮಂಥರೆಯು ಕೋಸಲಕ್ಕೆ ಬಂದಳು. ರವಿ ವಂಶದ ಅರಸರ ಊರಾದರೂನು ಕುರೂಪತೆಗೆ ಮನ್ನಣೆ ದೊರೆಯಲಿಲ್ಲ. ಮುದಿಗೂನಿಗೆ ಸಂತೋಷ ಮೊಲದ ಕೋಡಾಯಿತು.

ಅಲ್ಲಿಯ ಜನ ಶನಿಯೆಂದು ಶಪಿಸಿದರು. ಮೊಸಳೆಯನ್ನು ಕಂಡಂತೆ ಹುಬ್ಬು ಗಂಟಿಕ್ಕಿ ದೂರ ಸರಿದರು. ಅವಳ ಗಾಳಿ ಸೋಕಿದರೆ ಮೈಲಿಗೆಯಾಗುವದೆಂದು ಹತ್ತಿರಕ್ಕೆ ಸೇರಿಸದಾದರು. ಈಶ್ವರಾರಾಧನೆಗೆ ಹತ್ತಿರ ಬಿಟ್ಟುಕೊಳ್ಳುತ್ತಿರಲಿಲ್ಲ. ದಾಸಿಯರು ಕಿರಿಯ ರಾಣಿಯ ಆಜ್ಞೆಗೆ ಕಿವುಡಾಗಿ ನಿರ್ಲಕ್ಷಿಸುತ್ತಿದ್ದರು. ಊಟಕ್ಕೆ ಇಡುವ ಹೊತ್ತಿನಲ್ಲಿ ಹೊರಕ್ಕೆ ನೂಕುತ್ತಿದ್ದರು.

ಕೌಸಲ್ಯೆ ಸುಮಿತ್ರೆಯರು ಗೂನಿ ಮಂಥರೆಯನ್ನು ಅನಿಷ್ಟೆ ಎಂದು ಹೆದರಿ ಅಸಹ್ಯಪಡುತ್ತಿದ್ದರು. ಅವಳ ಜೊತೆಗಿದ್ದ ಕೈಕೆಯನ್ನು ಹತ್ತಿರ ಸೇರಿಸುತ್ತಿರಲಿಲ್ಲ! ಒಡತಿಯ ಒಳಿತಿಗಾಗಿ ಜೀವನವನ್ನೆ ಸಮರ್ಪಿಸಿದ ಆ ಕುಬ್ಜೆ ಕಮ್ಮಾರನ ಅಡಿಗಲ್ಲಿನಂತೆ ಎಲ್ಲ ಅವಮಾನದ ಹೊಡೆತವನ್ನು ಸಹಿಸಿಕೊಂಡಳು.

ಕೈಕೆಗೆ ಭರತ ಹುಟ್ಟಿದ ಮೇಲೆ ಮಂಥರೆಗೆ ಮೂರನೆಯ ಕಣ್ಣು ಮೂಡಿದಂತಾಯಿತು. ಅಂದಿನಿಂದ ಅವಳ ಬಾಳಿನಲ್ಲಿ ಹೊಸ ಪ್ರೀತಿಯ ಚೆಂದಳಿರು ಚಿಗುರಿತು. ಜಿಪುಣ ಬಡವನು ಚಿನ್ನವನ್ನು ಅಪ್ಪಿಕೊಳ್ಳುವಂತೆ ಆ ಕಂದನನ್ನು ಅಪ್ಪಿಕೊಂಡಳು. ಹಡೆದ ತಾಯಿಯೆ ನಾಚುವಂತೆ ಶಿಶು ಭರತನನ್ನು ಹಗಲಿರುಳು ಸಲಹಿದಳು. ಆಕೆಯ ಮೋಹ ಸರೋವರದಲ್ಲಿ ಭರತನು ತಾವರೆಯಾಗಿ ಬೆಳೆದನು.

ಉಳಿದ ಮಕ್ಕಳಾದ ಶ್ರೀರಾಮ, ಲಕ್ಷ್ಮಣ, ಶತ್ರುಘ್ನರು ಅವರ ತಾಯಿಯರು ಮತ್ತು ದಾಸಿಯರ ಅಕ್ಕರೆಯಲ್ಲಿ ಬೆಳೆದರು. ನಾಲ್ವರು ಬಾಲಕರು ಗುರು ವಸಿಷ್ಠನ ಬಳಿಯಲ್ಲಿ ಸೂಕ್ತ ವಿದ್ಯಾಭ್ಯಾಸ ಪಡೆದು ದಶರಥನ ನಾಲ್ಕು ತೋಳುಗಳಂತೆ ಬೆಳೆದರು.

ಕೋಸಲದಲ್ಲಿ ಗೂನಿ ಮಂಥರೆಗಿಂತ ಅತಿ ತಿರಸ್ಕೃತಳಾಗಲಿ, ಸಂತೃಪ್ತ ಸುಖಿಯಾಗಲಿ ಮತ್ತೊಬ್ಬರಿರಲಿಲ್ಲ. ಭರತ ಅಭ್ಯುದಯ ಚಂದ್ರೋದಯಕ್ಕೆ ಅವಳ ಎದೆ ಉಬ್ಬಿತು. ಹಾಳು ಕೊರಕಲು ಬಂಡೆಯಂತೆ ವಕ್ರವಾಗಿ, ಒರಟು ದಡದಂತೆ ಇದ್ದ ಅವಳ ಮೈಯನ್ನು ಉಬ್ಬುಬ್ಬಿ ಮೇಲಕ್ಕೆದ್ದ (ಉಚ್ಛ್ವಸಿತ) ಹರ್ಷದಲೆಗಳ ಸಮೂಹವು ಅಪ್ಪಳಿಸಿ ಮುಚ್ಚಿದವು. ಮಂಥರೆಯ ಲೋಕದಲ್ಲಿ ಕೈಕೆ ಭರತನನ್ನು ಹೊರತುಪಡಿಸಿ ಬೇರೆ ಯಾವ ನರರೂ ಇರಲಿಲ್ಲ. ದಶರಥ, ಕೋಸಲ, ಅಯೋಧ್ಯೆಗಳು ಕೈಕೆ ಭರತರಿಗಾಗಿ; ಸೂರ್ಯ, ಚಂದ್ರ, ತಾರೆಗಳು ಕೈಕೆ ಭರತರಿಗಾಗಿ; ಈ ಪೃಥ್ವಿ ಭರತನ ಆಳ್ವಿಕೆಗಾಗಿ! ಎಂದು ಅವಳ ಮಮತೆಯ ಸುಳಿಯಲ್ಲಿ ಸುತ್ತುತ್ತಿದ್ದವು. ಆ ಸುಳಿಯಲ್ಲಿ ಸಿಕ್ಕಿದ ಮಹಾತ್ರೇತಾಯುಗವು ಸುಂಟರಗಾಳಿಯ ಧೂಳಿನಲ್ಲಿ ಸಿಕ್ಕ ತರಗೆಲೆಯಂತೆ ತಿರುಗದೆ ಇರುತ್ತದೆಯೆ?

* * *

ನವ ವಧುವರರಾದ ಸೀತೆ ಮತ್ತು ಶ್ರೀರಾಮರು ಶೃಂಗಾರರಸದಲ್ಲಿ ಒಂದಾಗಿದ್ದರು. ರಾಮ ಸೀತೆಯರ ಬಾಳಿನ ದೋಣಿಯು ಸವಿಯಾದ ಹಾಲು ಜೇನಿನಲ್ಲಿ ತೇಲಾಡುತ್ತಿತ್ತು. ಆ ರಸ ದೋಣಿ ಮಂಥರೆಯ ಸುಳಿಗೆ ಸಿಕ್ಕಿ ದಡಕ್ಕನೆ ಮುಳುಗಿತು. ಆ ಸುಖ ನೌಕೆ ಮುಳುಗಲು, ಅದನ್ನು ಮುಳುಗಿಸಿದ ಸುಳಿಯೆ ಸುಂಟರ ಗಾಳಿಯಾಗಿ ತಿರ್ರನೆ ತಿರುಗಿಸಿ ಆ ಸುಖಗಳನ್ನು ಆಗಸಕ್ಕೆ ಎಸೆಯಿತು.

ಕಡೆಯದೆ ಬೆಣ್ಣೆ ಹೊಮ್ಮುವುದೆ? ಮಂಥರೆಯ ಭರತನ ಮೇಲಿನ ಮಮತೆ ವಾಸುಕಿಯೆಂಬ ಸರ್ಪ. ಅದು ಕೈಕೆಯನ್ನು ಮಂದಾರ ಪರ್ವತವಾಗಿಸಿ ಆ ತ್ರೇತಾಯುಗ ಸಮುದ್ರವನ್ನು ಕಡೆಯಿತು.

* * *

ಒಂದು ರಾತ್ರಿ ಅಯೋಧ್ಯೆಯ ಜನರು ಆಗಸದಲ್ಲಿ ಧೂಮಕೇತುವನ್ನು ಕಂಡರು. ಅದನ್ನು ನೋಡಿದ ದಶರಥ ಅಪಶಕುನವೆಂದು ತಿಳಿದನು. ಅದು ತನ್ನ ದೈವದ ಅಂತ್ಯಲಿಪಿ ಎಂದು ಭಾವಿಸಿದನು. ಹಿರಿಯ ಮಗನಾದ ರಾಮಚಂದ್ರನಿಗೆ ಬೇಗ ಪಟ್ಟ ಕಟ್ಟಲು ನಿಶ್ಚಯಿಸಿದನು. ಗುರುಗಳನ್ನು, ಸಚಿವರನ್ನು, ಪ್ರಜೆಗಳನ್ನು ಕರೆಸಿ ತನ್ನ ರಾಜ್ಯಭಾರದ ಹೊರೆಯನ್ನು ರಾಮನ ಹೆಗಲ ಮೇಲಿರಿಸಿ ತಾನು ಪಾರ ಲೌಕಿಕ ಸಾಧನೆಯಲ್ಲಿ ನಿರತನಾಗುವ ಅಪೇಕ್ಷೆ ತಿಳಿಸಿದನು. ಅವರೆಲ್ಲರು ಅದಕ್ಕೆ ಒಪ್ಪಿಗೆ ಸೂಚಿಸಿದರು. ಆಗ ಅಭಿಷೇಕಕ್ಕೆ ಅಣಿ ಮಾಡಲು ವಸಿಷ್ಠಾದಿ ಗುರುಗಳಿಗೆ ಅರಿಕೆ ಮಾಡಿಕೊಂಡನು.

ಅದೇ ಸಮಯದಲ್ಲಿ ರಾವಣನ ವಿಧಿಯು ಮಂಥರೆಯ ಮನಸ್ಸಿನಲ್ಲಿ ತನ್ನ ತಂತ್ರದ ಜಾಲವನ್ನು ಕನಸಾಗಿ ರೂಪಿಸಿತು. ಆ ಸ್ವಪ್ನದಲ್ಲಿ ಮುದುಕಿಯಾದ ಕೈಕೆ ವಿಧವೆಯಂತೆ ಭರತನ ಕೈಹಿಡಿದು ಮರುಭೂಮಿಯಲ್ಲಿ ಅಲೆಯುತ್ತಿದ್ದಳು. ಗೂನಿ ಮಂಥರೆ ಎಷ್ಟು ಕರೆದರೂ ಓಗೊಡಲಿಲ್ಲ. ಮಗನೊಡನೆ ಮುಂದುವರಿದ ಅವಳನ್ನು ಕತ್ತಲೆ ನುಂಗಿ ಹಾಕಿತು. ಮಂಥರೆ ಸುತ್ತಿ ಬಳಲಿ ಬಾಯಾರಿಕೆಯಿಂದ ರಾಮನನ್ನು ಕೂಗಿ ಕರೆದಳು!

ಆ ಕ್ರೂರ ಕನಸಿಗೆ ಎಚ್ಚೆತ್ತ ಮಂಥರೆ ಜೇಡಬಲೆಯೊಳಗೆ ಬಿದ್ದ ಹುಳದಂತೆ ಒದ್ದಾಡಿದಳು. ದಢಕ್ಕನೆ ಎದ್ದು ಕುಳಿತಳು. ಸ್ವಪ್ನ ಉಂಟು ಮಾಡುವ ಕೇಡನ್ನು ನೆನೆದು ಭಯಭೀತಳಾದಳು. ಅದೇ ಸಮಯಕ್ಕೆ ಕಿವಿಗೆ ಮಂಗಳ ವಾದ್ಯಗಳ ಸಂಭ್ರಮ ಕೇಳಿ ಬಂದಿತು.

ಕುತೂಹಲದಿಂದ ರಾಜಬೀದಿಗೆ ಬಂದಳು. ನಗರದ ಶೃಂಗಾರ, ಪುರಜನರ ಉತ್ಸಾಹ ಕಂಡಳು. ತೋರಣ, ಚಪ್ಪರ, ಹೊಂಬಣ್ಣದ ಬಾವುಟ ನೋಡಿದಳು. ಕತ್ತಿ ಹಿಡಿದು ಶಿಸ್ತಾಗಿ ನಿಂತಿದ್ದ ಯೋಧರನ್ನು, ತೇರಾನೆ, ಕುದುರೆಗಳ ಮೆರವಣಿಗೆಯನ್ನು ಕಂಡಳು. ಆ ಮಂಗಳ ಕಾರ್ಯದ ಸಂದರ್ಭವೇನೆಂದು ಕೇಳಿದಳು. ಅವಳ ವಿಕಾರ ರೂಪ ಕಂಡು ಜನ ಸಿಟ್ಟಾಗಿ ಮುಂದಕ್ಕೆ ಹೋದರು. ಅವಳು ಸಂಭ್ರಮವು ತುಳುಕಾಡುತ್ತಿದ್ದ ಕಲ್ಯಾಣ ಮಂಟಪಕ್ಕೆ ಹೋದಳು. ಅಲ್ಲಿ ಚೆಲುವಾದ ಹೆಣ್ಣುಗಳ ಮಧ್ಯೆ ನಗುತ್ತಿದ್ದ ರಾಮನ ದಾಸಿಯನ್ನು ಮಾತಾಡಿಸಿದಳು. ಅವಳಿಗೆ ಕಹಿಯಾದ ರಾಮ ಪಟ್ಟಾಭಿಷೇಕದ ಸತ್ಯ ತಿಳಿಯಿತು. ಆಗ ಹೃದಯ ಒಡೆದಂತೆ ತತ್ತರಿಸಿದಳು. ಕೈಕೆಯ ಅರಮನೆಗೆ ಓಡಿ ಬಂದು ಉದ್ವೇಗದಿಂದ ಚೀರಿದಳು:

‘ಓ ಕೈಕೆ ಮತಿಗೇಡಿ, ನಿರ್ಭಾಗ್ಯೆ ಇನ್ನೂ ನಿದ್ದೆಯೆ ನಿನಗೆ? ಮೇಲೇಳು, ಏಳು, ನಿನ್ನ ಸಿರಿಯ ಗೋಪುರ ಉರುಳಿ ಬಿದ್ದಿದೆ! ಹೊಂಗನಸು ಹುಡಿಯಾಗಿದೆ. ನಿನ್ನ

ಬಹುದಿನದ ಬಯಕೆ ಬಯಲಾಗಿದೆ! ನೀನು ಕೆಟ್ಟೆ! ಹಾ ಭರತ! ಎಲ್ಲಿರುವೆ? ಇಂದು ಎಲ್ಲಿರುವೆ! ಬೇಗ ಬಾ!'

ಆ ರೀತಿ ಗೋಳಿಡುತ್ತ ಕಿರಿ ರಾಣಿಯ ಬಳಿ ಹೋಗುವ ಮೊದಲೆ ಬಡಿಗೆಯಿಂದ ಬಡಿಸಿಕೊಂಡವಳಂತೆ ಹೊಸ್ತಿಲ ಮೇಲೆ ದೊಪ್ಪನೆ ಕುಸಿದು ಬಿದ್ದಳು. ಭರತನ ತಾಯಿಯಂತಿದ್ದ ಆ ವೃದ್ಧೆಗೆ ಕೈಕೆ ಉಪಚರಿಸಿದಳು. ಮಂಥರೆಯು ಕಣ್ತೆರೆದು ಎಚ್ಚರಗೊಂಡು ಕನಿಕರದ ನೋಟವನ್ನು ಬೀರುತ್ತ, ರಾಣಿಯನ್ನು ಬಿಗಿದಪ್ಪಿ ಬಿಕ್ಕಿ ಬಿಕ್ಕಿ ಅತ್ತಳು!

ಕೈಕೆಯು 'ಏನಾಯಿತು ಹೇಳವ್ವ, ಹೇಳು' ಎಂದು ಕೇಳಲು; 'ಭರತ, ಭರತ' ಎಂದು ತೊದಲಿ ಮುದುಕಿ ಸುಮ್ಮನಿದ್ದಳು. ಮಗನಿಗೆ ಏನಾಯಿತೋ, ಅಳಿದನೋ, ಉಳಿದನೋ ಎಂಬ ಶಂಕೆಯಿಂದ ದಶರಥನ ರಾಣಿ ಅಳತೊಡಗಿದಳು. ಆಗ ಗೂನಿ ಹೇಳಿದಳು:

'ಕೈಕೆ ನಿನ್ನ ಸೌಂದರ್ಯದಂತೆ ನಿನ್ನ ಸಂಪತ್ತು ಬೇಸಿಗೆಯ ಹೊಳೆಯಾಯಿತು. ಮಕರಂದವನ್ನು ಹೀರಿದ ಮೇಲೆ ದುಂಬಿಗೆ ಹೂವಿನ ಗೊಡವೆಯೇಕೆ? ದಶರಥನಿಗೆ ನೀನು ಹಾಗೆ ಆಗಿರುವೆ ಮಗಳೆ, ಒಂದು ಕೆಟ್ಟ ಸುದ್ದಿಯನ್ನು ಹೇಳುವೆನು. ಧೈರ್ಯವಿದ್ದರೆ ಕೇಳು.'

'ಬೆಳ್ಳಂಬೆಳಿಗ್ಗೆ ಧೈರ್ಯದ ಮಾತೇಕೆ? ಅದೇನು ಹೇಳುವೆ ಹೇಳು'

'ಅಯ್ಯೋ, ವಂಚಕರ ಸಂಚಿನಿಂದ ನಮ್ಮ ಭರತನಿಗೆ ಈ ನೆಲ ಕೈ ತಪ್ಪಿತು. ನಾವಿಬ್ಬರಿದ್ದು ಏನು ಪ್ರಯೋಜನ? ಮುಗ್ದೆ ಹೇಳು, ವಿಪತ್ತು ಸಮೀಪಿಸಿರುವಾಗಲೂ ಸುಮ್ಮನೆ ಕುಳಿತಿರುವುದು ಬುದ್ಧಿವಂತರ ಲಕ್ಷಣವೆ? ನಿನಗೆ ಗೊತ್ತಿಲ್ಲದಂತೆಯೇ ನಿನ್ನ ಕುತ್ತಿಗೆಯನ್ನು ಕೊಯ್ಯುವ ಕತ್ತಿಯನ್ನು ಮಸೆದಿದ್ದಾರೆ! ನಿನ್ನ ದುಃಖವೆ ನನ್ನ ದುಃಖ. ನಿನ್ನ ಸುಖವೆ ನನ್ನ ಸುಖ. ನನಗೆ ಬೇರೆ ಏನಿದೆ ಹೇಳಕ್ಕ?'

'ಉದ್ವೇಗಕ್ಕೊಳಗಾಗಬೇಡ. ಏನಾಯಿತೆಂದು ಹೇಳು.'

'ಅಲ್ಪ ಮತಿಯಾದ ನೀನು ದಶರಥನ ಪ್ರೇಮದಂಥ ಭಾಗ್ಯ ಬೇರಿಲ್ಲ ಎಂದು ತಿಳಿದಿರುವೆ! ಕ್ಷತ್ರಿಯ ಕುಲವು ಕ್ರೌರ್ಯದಲ್ಲಿ ರಾಕ್ಷಸ ಕುಲವನ್ನು ಮೀರಿಸುತ್ತದೆ. ದಶರಥನು ಆ ಕುಲವರೇಣ್ಯ! ಸವಿನುಡಿಯ ಮಧುಪಾನದಿಂದ ಆತನಿಗೆ ನೀನು ಮರುಳಾಗಿ ಹೋದೆ. ನಿಜ ಪ್ರೇಮ ಕೌಸಲ್ಯೆಗಾಯಿತು. ಹುಸಿ ಪ್ರೇಮ ನಿನಗಾಯಿತು.'

'ನನಗೇನೂ ಅಂತಹ ನಷ್ಟವಾಗಿಲ್ಲ. ಅದೇನಾಯಿತು. ಹೇಳು'

'ಕಿವಿಗೊಟ್ಟು ಕೇಳು. ಉಪಾಯದಿಂದ ಭರತನನ್ನು ನಿನ್ನ ತವರಿಗೆ ಕಳುಹಿಸಿಕೊಟ್ಟು, ಅವರು ನಾಳೆ ರಾಮನಿಗೆ ಪಟ್ಟ ಕಟ್ಟುವರಂತೆ! ಆ ರಾಮನನ್ನು ತೊಡೆಯ ಮೇಲಿಟ್ಟುಕೊಂಡು ಪ್ರೀತಿಯಿಂದ ಪಾಲಿಸಿದೆ. ಹಾವಿಗೆ ಹಾಲು ಎರದೆ! ಮೊಟ್ಟೆಯಲ್ಲಿದ್ದಾಗಲೆ ಅದನ್ನು ಸಾಯಿಸಬೇಕಿತ್ತು. ಆ ಹಗೆ ಹಾವು ಹೆಡೆಯೆತ್ತಿ ಸಾಕಿದವರನ್ನು ಕೊಲ್ಲುವುದು ಖಂಡಿತ. ಕಿರಿಯಳಾದ ನಿನಗೆ ಇದು ಗೊತ್ತಾಗುವುದಿಲ್ಲ.'

ಅದನ್ನು ಕೇಳಿದ ಕೈಕೆಯ ಮುಖವು ಚಂದ್ರನನ್ನು ಕಂಡು ನೈದಿಲೆ ಅರಳುವಂತೆ ಅರಳಿತು. ಕೊರಳ ಸರವನ್ನು ಮಂಥರೆಗೆ ನೀಡುತ್ತ ಹೇಳಿದಳು:

'ಶುಭದ ವಾರ್ತೆಯನ್ನು ತಂದುದಕ್ಕೆ, ಇಗೊ, ತೆಗೆದುಕೊ ಬಹುಮಾನ. ರಾಮನೇನು, ಭರತನೇನು ಇಬ್ಬರೂ ನನ್ನ ಮಕ್ಕಳೆ!'

ಆ ಹಾರವನ್ನು ಹಿಡಿದು ಅಪ್ಪಳಿಸಿ ನೆಲಕ್ಕೆ ಎಸೆದ ಕುಬ್ಜೆ ಮಂಥರೆಯು, ರಾಣಿಗೆ ಮಾತನಾಡಲು ಅವಕಾಶ ಕೊಡದೆ ಹೀಗೆ ನುಡಿದಳು:

'ಮೂರ್ಖಳೆ, ಸಾಕು ನಿಲ್ಲಿಸು ನಿನ್ನ ಮಾತು. ನಿನ್ನ ಬುದ್ಧಿಗೆ ಏನಾಗಿದೆ? ಬಹುಕಾಲ ಅರಮನೆಯ ಸುಖ ಅನುಭವಿಸಿ ನಿನ್ನ ಬುದ್ಧಿ ಕೆಟ್ಟಿದೆಯೆ? ಹೆತ್ತ ಮಗುವನ್ನೆ ತಿನ್ನುವ ರಕ್ಕಸಿಯಂತೆ ಮಾತನಾಡುತ್ತಿರುವೆ. ನಿನ್ನ ಕಂದನಿಗೆ ನೀನೆ ಮೃತ್ಯುವಾದೆ! ರಾಮಾಭಿಷೇಕವು ನಿನಗೆ ಪ್ರಿಯವೆ? ಸವತಿ ಮಗನಿಗಿಂತ ವೈರಿ ಈ ಲೋಕದಲ್ಲಿ ಬೇರೆಇರುವರೆ? ಕೌಸಲ್ಯೆಗಿಂತ ನೀನೇನು ಕಡಿಮೆ? ರಾಮನಿಗಿಂತ ಭರತನೆ ದಿಟವಾಗಿ ಜೇಷ್ಠ. ಮುಗ್ಧಳಾದ ನಿನಗೆ ಹೇಳುತ್ತೇನೆ ಕೇಳು ನೀನು ಹೆರಿಗೆ ಬೇನೆಯಲ್ಲಿದ್ದೆ. ನನಗೆಲ್ಲವೂ ಗೊತ್ತು. ದೊರೆ, ಮಂತ್ರಿ, ಕುಲಪುರೋಹಿತರೆಲ್ಲರೂ ಪ್ರೀತಿಯ ಪಕ್ಷಪಾತದಿಂದ ಕೌಸಲ್ಯೆಯ ಮಗನನ್ನು ಹಿರಿಯನನ್ನಾಗಿ ಮಾಡಿದರು. ಸೊನ್ನೆಯೇ ನಿನಗೆ ಬಳುವಳಿಯಾಯ್ತು'. ಎಂದು ಹೇಳಿ ಸುಧಾರಿಸಿಕೊಳ್ಳುತ್ತ ಮಾತು ಮುಂದುವರಿಸಿದಳು.

'ರಾಮನ ಆಳ್ವಿಕೆಯಲ್ಲಿ ನೀನು ಕೌಸಲ್ಯೆಯ ಕಾಲ್ದೆಸೆಯ ಧೂಳಾಗುತ್ತೀಯೆ. ನೀನು ಈ ಅರಮನೆಗೆ ಬಂದ ಹೊಸತರಲ್ಲಿ ಕೌಸಲ್ಯೆ ಮಾತ್ಸರ್ಯದಿಂದ ಕೊಟ್ಟ ಕಾಟವನ್ನು ಮರೆತೆಯಾ? ನಿನ್ನಂತೆ ಎಲ್ಲರೂ ಸಾತ್ವಿಕ ಮೂರ್ತಿಗಳೆಂದು ತಿಳಿದು ನೀನು ಕೆಡುವೆ. ನೀನು ಬೇಗ ಎಚ್ಚರಗೊಳ್ಳದಿದ್ದರೆ ಹುಡಿಯಾಗಿ, ಹಾಳಾಗಿ ಗತಿಗೆಡುವೆ. ಬೆಪ್ಪೆ, ಒಳಸಂಚು ನಡೆದು ಹೋದ ಮೇಲೆ, ಕಾಲ ಮಿಂಚಿದ ಮೇಲೆ ಕೊರಗಬೇಡ' ಎಂದು ತಿಳಿಸಿ, ಉರಿವ ಬೆಂಕಿಗೆ ತುಪ್ಪವನ್ನು ಸುರಿದಂತೆ ತನ್ನ ಕನಸನ್ನು ಹೇಳಿದಳು. ಕೈಕೆ ಎಲ್ಲವನ್ನು ಕೇಳುತ್ತ ಕೆನ್ನೆಗೈಯಾಗಿ, ಕಂಬನಿ ದುಂಬಿ, ಕಣ್ಮುಚ್ಚದೆಯೆ ಎದುರುಗೋಡೆ ನೋಡುತ್ತ ಮೌನವಾಗಿದ್ದಳು. ಮಾವನ ಮನೆಯಲ್ಲಿ ದೂರದಲ್ಲಿದ್ದ ಮಗನನ್ನು ನೆನೆಸಿಕೊಂಡಳು. ಅದು ಗರಗಸದಂತೆ ಕೊಯ್ಯತೊಡಗಿತು. ಮಂಥರೆಯ ನುಡಿಯನ್ನು ಮೆಲುಕಾಡಿದಳು. ಹೃದಯ ಒಡೆದಂತಾಯಿತು. ದುಃಖ ಇಮ್ಮಡಿಸಿತು. ಕೊರಳು ಕಟ್ಟಿತು. ಮಾತು ಹೊಮ್ಮಲಿಲ್ಲ. ಆ ಗೂನಿಯೆ ಮತ್ತೆ ಮಾತಾಡಿದಳು.

'ಅಮ್ಮ ಕೈಕೆ, ಶತ್ರುಘ್ನನು ಇಲ್ಲಿದ್ದರೆ ಪಟ್ಟಕ್ಕೆ ಅಡ್ಡಿ ಮಾಡುವನೆಂದು ಅವನನ್ನು ಭರತನೊಡನೆ ಕಳುಹಿಸಿದ್ದಾರೆ. ಹೆಮ್ಮರಕ್ಕೆ ಹಬ್ಬಿದ ಮುಳ್ಳು ಬಳ್ಳಿ ಆ ಮರವನ್ನು ಕಡಿಯದಂತೆ ತಡೆಯುತ್ತದೆ. ಹಾಗೆ ಕೌಸಲ್ಯೆಯ ಮಗನಿಗೆ ಲಕ್ಷ್ಮಣ ರಕ್ಷಕನಾಗಿದ್ದಾನೆ.

'ಭರತನನ್ನು ರಾಮನಿಗೆ ದಾಸನನ್ನಾಗಿ ಮಾಡಬೇಡ. ದಯೆ ತೋರಿ ಕಾಡಿಗಾದರೂ ಕಳುಹಿಸು. ನಾನು ಅವನೊಡನೆ ಹೋಗಿ ಶುಶ್ರೂಷೆ ಮಾಡುತ್ತೇನೆ. ಇದು ನಾನು ನಿನ್ನಲ್ಲಿ ಕೇಳುವ ಭಿಕ್ಷೆ' ಎಂದು ಹೇಳಿ ಮಂಥರೆ ಹೊರಡಲು ಎದ್ದು

ನಿಂತಳು. ಕೈಕೆ ಅವಳನ್ನು ಮುಳುಗುವಾತನು ಪ್ರಾಣ ರಕ್ಷಣೆಗೆ ಮೊಸಳೆಯನ್ನು ತಬ್ಬುವಂತೆ ಬಿಗಿದಪ್ಪಿದಳು. ಆಗ ಉತ್ಸಾಹ ಮರುಕಳಿಸಿದಂತೆ ಮಂಥರೆ ಹೇಳಿದಳು.

'ಮೇಲೇಳು, ಬರಿ ಅಳುವಿನಿಂದ ಏನೂ ಆಗುವುದಿಲ್ಲ. ಕಾರ್ಯಸಾಹಸಿಯಾಗು! ವೀರ ಸತಿಯಾದ ನೀನು ಮರೆತರೂ ನಾನು ನೆನಪಿಸುವೆ. ಮಗಳೆ, ನೀನು ನನಗೆ ಹೇಳಿದ್ದ ರಹಸ್ಯವನ್ನು ನೆನಪು ಮಾಡಿಕೊ. ದಶರಥನು ನಿನ್ನ ಚೆಲುವಿಗೆ ಸೋತು, ಸೌಂದರ್ಯ ದಾಸನಾಗಿ ಮದುವೆಯಾಗುವಂತೆ ಮೊದಲು ನಿನಗಿತ್ತ ಭಾಷೆಯನ್ನು ನೆನಪು ಮಾಡಿಕೊ'.

ಅವಳ ಆ ನುಡಿಗೆ ಕೈಕೆ ಹಿಗ್ಗಿದಳು. ವಕ್ರಗಾತ್ರೆಯನ್ನು ತಬ್ಬಿ ನುಡಿದಳು.

'ಓ ನನ್ನ ಭಾಗ್ಯದೇವತೆಯೆ, ಕಣ್ಣು ಕಾಣಿಸದ ನನಗೆ ದಾರಿ ತೋರಿಸಿದೆ. ನೀನು ನನ್ನನ್ನು ಮರಳಿ ಹಡೆದ ತಾಯಿ. ಈ ಪರದೇಸಿಯನ್ನು ನೀನು ಕೈ ಬಿಟ್ಟರೆ ಇನ್ನಾರು ಗತಿ? ಇದುವರೆಗೆ ನಾನು ಕಣ್ಣಿದ್ದು ಕುರುಡಿಯಾಗಿದ್ದೆ. ನೋಡು, ನನ್ನ ಕಡೆಗೆ ನೋಡು. ನೀನು ಇಂದು ನನಗೆ ಸುಂದರ ರೂಪಿಣಿಯಾಗಿ ಕಾಣುತ್ತಿರುವೆ. ಲೋಕದಲ್ಲಿ ಹೊರ ಮೈಯನ್ನಷ್ಟೆ ನೋಡುತ್ತ ಸೊಬಗನ್ನು ಕಾಣುವರು ಬರಿಯ ಬೆಪ್ಪರಲ್ಲವೆ? ನಿಜವಾದ ಸೌಂದರ್ಯ ಆತ್ಮಕ್ಕೆ ಸೇರಿದುದು. ಗೂನಿಯಾಗಿದ್ದರೂ ನಿನಗಿಂತ ಸುಂದರಿಯರು ಇರುವರೆ? ಗಂಧದ ಕೊರಡು ಡೊಂಕಾದರೆ ಗಂಧಕ್ಕೆ ಕೊರತೆಯೆ?'

ಎಂದು ಸರ್ವಸೌಂದರ್ಯ ನಿಧಿಯಾದ ಕೈಕೆ ಕುರೂಪತಾ ಮುದ್ರೆಯನ್ನು ಮುದ್ದಾಡಿದಳು.

ಮೀನುಗಾರನು ಮೀನು ಕಚ್ಚಿತೆಂದು ಗೊತ್ತಾಗಲು ಗಾಳದ ನೇಣವನ್ನು ಒಂದಿನಿತು ಸಡಿಲ ಬಿಡುವಂತೆ ಕುಬ್ಜೆ ಮತ್ತೆ ನುಡಿದಳು:

'ಚಂದ್ರವದನೆಯೆ, ನಿರ್ಣಯಕ್ಕೆ ಬರುವ ಮೊದಲು ಮತ್ತೊಮ್ಮೆ ಆಲೋಚಿಸು. ದುಡುಕಬೇಡ. ತಲೆಕೆಟ್ಟ ಗೂನಿಯಾದ ನನ್ನ ಮಾತಿಗೆ ಕಟ್ಟುಬಿದ್ದು, ತರುವಾಯ ದೂರಬೇಡ. ನಿನ್ನ ಮತ್ತು ಭರತನ ಮೇಲಿನ ಮಮತೆ ಮತ್ತು ಪ್ರೀತಿಯಿಂದ ಹೀಗೆ ಹೇಳುತ್ತಿರುವೆನೇ ಹೊರತು ರಾಮನ ಮೇಲಿನ ದ್ವೇಷದಿಂದಲ್ಲ. ರಾಮ ಚೆನ್ನಾಗಿರಲಿ!

'ಚೆನ್ನಾಗಿ ಕೇಳಿಸಿಕೊ. ರಾಮನು ಕೋಸಲದಲ್ಲಿರುವವರೆಗೆ ಭರತನಿಗೆ ಈ ನೆಲ ಸಿಗುವುದಿಲ್ಲ. ಚಕ್ರಾಧಿಪತ್ಯವನ್ನು ದಶರಥನಿಂದ ಪಡೆದು ಭರತನಿಗೆ ಕೊಟ್ಟರೂ, ರಾಮನ ಪಕ್ಷದವರು ಸಂಚು ಮಾಡಿ ಬಾಲರ್ಷಿ ಭರತನನ್ನು ಹಳ್ಳಕ್ಕೆ ಕೆಡವುತ್ತಾರೆ. ಆದುದರಿಂದ ಕೌಸಲ್ಯೆಯ ಮಗನಿಗೆ ಹದಿನಾಲ್ಕು ವರ್ಷ ಅರಣ್ಯಯಾತ್ರೆ ಮತ್ತು ನಿನ್ನ ಮಗನಿಗೆ ರಾಜ್ಯ ಪದವಿ ಒಟ್ಟಿಗೆ ದೊರೆಯುವಂತೆ ಪ್ರಯತ್ನಿಸಬೇಕು. ಅಗೋ ವಾದ್ಯಗಳ ಮಂಗಳರವವನ್ನು ಕೇಳು!'

ಗಾಳವನ್ನು ಸಡಲಿಸಿದಷ್ಟು ಕೊಂಡಿಯೊಳಗಿನ ಎರೆಯನ್ನು ನುಂಗಲು ಮೀನು ಹವಣಿಸುವಂತೆ ಕೈಕೆಯು ಮುದಿ ದಾಸಿಯನ್ನು ಬಿಗಿದಪ್ಪಿಕೊಂಡು ಹೀಗೆ ಹೇಳಿದಳು:

‘ಕೆಳದಿಯೆ, ನಾನು ಇದುವರೆಗೆ ನಿನ್ನ ಮಹಿಮೆಯನ್ನು ತಿಳಿಯದೆ ಮೂರ್ಖಳಾಗಿದ್ದೆ. ಈಗ ನೀನೆ ಮುಂದಿನ ದಾರಿಯನ್ನು ತೋರಿಸು.’

‘ಮರುಳೆ ಸೌಂದರ್ಯದಿಂದ ಸಮಸ್ತ ಲೋಕವನ್ನು ಗೆಲ್ಲಬಹುದು. ಅದರ ಎದುರು ಕೋಸಲವು ಒಂದು ತೃಣವಲ್ಲವೆ? ಏಳು, ತಡ ಮಾಡಬೇಡ! ತೊರೆ ಇಳಿದ ಮೇಲೆ ಸೇತುವೆ ಕಟ್ಟಿ ಪ್ರಯೋಜನವೇನು? ಕೋಪಗೃಹವನ್ನು ಸೇರು. ನಿನ್ನ ಇಷ್ಟ ನೆರವೇರುವವರೆಗೆ ಹೊರಗೆ ಬರಬೇಡ.’

* * *

ದಶರಥನು ರಾಮನಿಗೆ ಅಭಿಷೇಕವನ್ನು ನಿಶ್ಚಯಿಸಿ ಅದನ್ನು ತಿಳಿಸಲು ಕೈಕೆಯ ಅಂತಃಪುರಕ್ಕೆ ಹೋಗುತ್ತಾನೆ. ಅವಳು ಅಲ್ಲಿರದೆ ಕೋಪಗೃಹದಲ್ಲಿರಲು ಅಲ್ಲಿಗೆ ಹೋಗಿ ಅವಳ ದುಸ್ಥಿತಿಯನ್ನು ಕಾಣುತ್ತಾನೆ. ಕೈಕೆಯು ಅವನನ್ನು ಹಿಂದೊಂದು ಪ್ರಣಯ ಪ್ರಸಂಗದಲ್ಲಿ ಕೊಟ್ಟ ಮಾತು ಮತ್ತು ವರಗಳ ಇಕ್ಕುಳದಲ್ಲಿ ಸಿಕ್ಕಿಸುತ್ತಾಳೆ. ಭರತನಿಗೆ ಪಟ್ಟವನ್ನು ಕಟ್ಟಿ ರಾಮನನ್ನು ವನವಾಸಕ್ಕೆ ಕಳುಹಿಸುವಲ್ಲಿ ಯಶಸ್ವಿಯಾಗುತ್ತಾಳೆ.

ದಶರಥನು ಕೈಕೆಯ ನಾಲಗೆಯ ಹರಿತಕ್ಕೆ ಮತಿ ಶೂನ್ಯನಾಗಿ ಬೀಳುತ್ತಾನೆ.

ಅಷ್ಟರಲ್ಲಿ ಕುಬ್ಜೆ ಮಂಥರೆಯು ರಾಮನ ಬಳಿಗೆ ಓಡಿದಳು. ಪಟ್ಟಾಭಿಷೇಕ ಶುಭವಾರ್ತೆ ಕೇಳಿದ ರಾಮನು ಸಂತೋಷದಿಂದ ತಾಯಿಯೊಡನೆ ಪೂಜೆಯಲ್ಲಿ ನಿರತನಾಗಿದ್ದನ್ನು ನೋಡಿದಳು. ಅಲ್ಲಿ ಅವಳು ಅವನ ಕಾಲನ್ನು ಹಿಡಿದು ರೋದಿಸಿದಳು. ರಾಮನು ಕನಿಕರಿಸಿ ಕೈ ಹಿಡಿದು ದುಃಖದ ಕಾರಣವನ್ನು ಕೇಳಿದನು. ಅವಳು ಸತ್ಯವನ್ನು ಅಸತ್ಯದಿಂದ ಬೇರ್ಪಡಿಸಲು ಸಾಧ್ಯವಾಗದಂತೆ ತೊದಲಿದಳು. ಅದನ್ನು ಕೇಳಿ ಕೌಸಲ್ಯೆ ಬೆಚ್ಚಿದಳು. ಸತ್ಯವನ್ನು ತಿಳಿದು ಬರುತ್ತೇನೆಂದು ತಾಯಿಗೆ ಸಮಾಧಾನ ಹೇಳಿದ ರಾಮನು ಕೈಕೆ ದಶರಥರಿದ್ದಲ್ಲಿಗೆ ಹೋದನು.

ಅಲ್ಲಿ ರಾಮನು ಕೈಕೆಗೆ ‘ನೀನು ಕೇಳಿದ ವರವು ನಾನು ಬಯಸಿದುದಾಗಿದೆ.’ ಎಂದು ಪಿತೃದೇವನ ವಚನವನ್ನು ಪಾಲಿಸುವುದಾಗಿ ತಿಳಿಸಿದನು. ಅವನು ನಿಧಾನವಾಗಿ ಎಚ್ಚರಗೊಳ್ಳುತ್ತಿದ್ದ ತಂದೆಗೆ ಉಪಚಾರ ಮಾಡುತ್ತಿರಲು ಕುಬ್ಜೆ ಮತ್ತೆ ಹೀಗೆ ಹೇಳಿದಳು:

‘ಹೆತ್ತ ತಂದೆಯು ತನ್ನ ಮಗನಿಗೆ ರಾಜ ಪದವಿಯನ್ನು ಬಿಟ್ಟು ಕಾಡಿಗೆ ಹೋಗು ಎಂದು ಅಪ್ಪಣೆ ಕೊಡುವುದುಂಟೆ? ತಂದೆಯ ಇಂಗಿತವನ್ನು ತಿಳಿದು ನಡೆಯುವುದೆ ನಿನಗೆ ಸರಿಯಾದ ಮಾರ್ಗ.’

ಮಂಥರೆಯ ಚಾಟಿಯ ಹೊಡೆತದಂತಹ ಕ್ರೂರ ನುಡಿ ಕೇಳಿ ದಶರಥನ ಪ್ರಾಣವು ಆಯಾಸಗೊಂಡಿತು. ಅದನ್ನು ಕಂಡು ರಾಜೀವಲೋಚನ ರಾಮನ ಕಣ್ಣುಗಳಲ್ಲಿ ನೀರು ತುಂಬಿತು.

‘ತಾಳಿಕೊ ತಾಯಿ! ಮಗನ ಮೇಲಿನ ಪ್ರೀತಿಯಿಂದ ತಂದೆ ಬಾಯ್ಬಿಟ್ಟು ಹೇಳದಿದ್ದರೂ, ನಾನೇ ಅರಣ್ಯಕ್ಕೆ ಹೋಗುತ್ತೇನೆ. ಹದಿನಾಲ್ಕು ವರ್ಷದ ಅವಧಿ ಪೂರೈಸಿ ಬರುತ್ತೇನೆ. ನಿಮ್ಮ ಅಪ್ಪಣೆ ಪಾಲಿಸುತ್ತೇನೆ. ನನ್ನ ತಂದೆಯ ಪಾದಸೇವೆಯನ್ನು

ಮಾಡುತ್ತೇನೆ' ಎಂದು ಹೇಳಿದನು. ತಂದೆಗೆ ಪ್ರದಕ್ಷಿಣೆ ಬಂದು, ಕೈಕೆಗೆ ನಮಸ್ಕರಿಸಿ ಮಂಗಳವು ಮನೆಯನ್ನು ತ್ಯಜಿಸಿದಂತೆ ಅಲ್ಲಿಂದ ಹೊರಟನು.

* * *

ಶ್ರೀರಾಮನು ಮಡದಿ ಮತ್ತು ತಮ್ಮ ಲಕ್ಷ್ಮಣನನ್ನು ತನ್ನೊಡನೆ ಅರಣ್ಯಕ್ಕೆ ಕರೆದೊಯ್ಯಲು ರಾಜಾಜ್ಞೆಗಾಗಿ ತಂದೆಯ ಬಳಿಗೆ ಹೋದನು. ದಶರಥನು ಅವರು ಕಾಡಿನಲ್ಲಿರುವಷ್ಟು ಕಾಲ ಅನುಕೂಲವಾಗಿರಲು ವ್ಯವಸ್ಥೆ ಮಾಡುವಂತೆ ಸುಮಂತ್ರನಿಗೆ ತಿಳಿಸಿದನು. ಆಗ ಅಲ್ಲಿದ್ದ ಮಂಥರೆ ಕೈಕೆಯನ್ನು ಅರ್ಥಪೂರ್ಣವಾಗಿ ನೋಡಿದಳು. ಅದನ್ನು ಗಮನಿಸಿದ ರಾಮಚಂದ್ರನು 'ತನಗೆ ಅದೇನು ಬೇಡ, ಕಾಡಿನಲ್ಲಿ ಗೆಡ್ಡೆ ಗೆಣಸು ಅಗೆಯಲು ಒಂದು ಗುದ್ದಲಿ, ಹಣ್ಣು ಹಂಪಲು ತುಂಬಿಕೊಳ್ಳಲು ಒಂದು ಬುಟ್ಟಿ ಕೊಟ್ಟರೆ ಸಾಕು' ಎಂದು ಹೇಳಿದನು.

ಆಗ ಕುಬ್ಜೆ ಸೇವಾತತ್ಪರಳಂತೆ ಹೋಗಿ ನಾರು ವಸ್ತ್ರಗಳನ್ನು ತಂದು ಕೊಟ್ಟಳು. ಆಗ ಅಲ್ಲಿದ್ದವರೆಲ್ಲ ಅವಳನ್ನು ಶಪಿಸಿದರು.

ರಾಜಕುವರಿ ಸೀತೆ ಹುಟ್ಟಿನಿಂದಲೂ ಪಟ್ಟೆ ಪೀತಾಂಬರ ಉಟ್ಟವಳು. ಮಂಥರೆ ನೀಡಿದ ನಾರುಮಡಿಯನ್ನು ತೊಡಲು ಅರಿಯದೆ ಪತಿಯ ಕಡೆಗೆ ಇಂಗಿತದಿಂದ ನೋಡಿದಳು. ಆಗ ರಾಮನು ಅವಳಿಗೆ ಅದನ್ನು ಉಡಿಸಲು – ತಾಯಿ ಕೌಸಲ್ಯೆ ಅದನ್ನು ನೋಡಲಾರದೆ ದುಃಖಿಸುತ್ತ ಮುಖವನ್ನು ಮುಚ್ಚಿಕೊಂಡಳು. ಆದರೆ ವಿಕಟ ಮಂಥರೆ ದೂರದಲ್ಲಿ ನಿಂತು ಆ ಸಂಕಟವನ್ನು ನೋಡುತ್ತಿದ್ದಳು.

* * *

ಭರತನು ಶತ್ರುಘ್ನನೊಡನೆ ಕೇಕಯಪುರದ ತನ್ನ ಸೋದರ ಮಾವನ ಮನೆಯಿಂದ ಹಿಂದಿರುಗಿದನು. ತನ್ನ ಮನು ನಗರವು ನಿರ್ಜನ ಪಾಳುಮನೆಯಂತೆ ಕಾಣುತ್ತಿತ್ತು. ಭರತನು ತಾಯಿ ಕೈಕೆಯಿಂದ ಅವಳು ಮಂಥರೆಯ ಸಲಹೆಯಂತೆ ದಶರಥನಿಂದ ವರವನ್ನು ಬೇಡಿ ರಾಮನನ್ನು ಕಾಡಿಗೆ ಕಳುಹಿಸಿ, ಪತಿಯ ಅಪಮೃತ್ಯುವಿಗೆ ಕಾರಣಳಾದುದನ್ನು ತಿಳಿದನು.

ದಾಸಿ ಮಂಥರೆ ಭರತನು ಬಂದುದನ್ನು ಕೇಳಿ ನವಿಲು ಗರಿಗೆದರಿ ಕುಣಿದಂತೆ ಹರ್ಷಗೊಂಡಳು. ತಾನು ಮುದ್ದಿ ಆಡಿಸಿ ಬೆಳೆಸಿದ ತನ್ನ ಪ್ರೇಮದ ಕೈಕೆಯ ಕುವರನಿಗೆ ರಾಜಾಭಿಷೇಕ ಎಂದು ಉಲ್ಲಸಿತಳಾದಳು. ಆಗ ಅವಳ ನೆರಿಗೆಗೆಟ್ಟ ಮುದಿಗೂಬೆಯ ಮುಖವು ಇನ್ನೂ ವಿಕಾರವಾಗಿ ಕಾಣತೊಡಗಿತು. ಅವಳು ಸಂಭ್ರಮ ಆತುರದಿಂದ ತನ್ನ ಒಡತಿಯ ಅರಮನೆಗೆ ಬರುತ್ತಿದ್ದಳು.

ನಡೆದ ಘಟನೆಯನ್ನೆಲ್ಲ ತಿಳಿದು ಕೋಪಾಗ್ನಿ ರೂಪವಾಗಿದ್ದ ಶತ್ರುಘ್ನನನ್ನು ಅವಳು ದಾರಿಯಲ್ಲಿ ಕಂಡಳು. ದೂರದ ಕಾಡು ಕಿಚ್ಚನ್ನು ತೊಡೆಯೇರಲು ಆಹ್ವಾನಿಸುವ ತರಗೆಲೆಯಂತೆ ಅವನನ್ನು ಪ್ರಶ್ನಿಸಿದಳು:

'ಅಯ್ಯ, ಭರತನೆಲ್ಲಿ?'

ಕೋಪದ ಕಿಡಿಯನ್ನುಗುಳಿದಂತೆ ಶತ್ರುಘ್ನನು ಅವಳನ್ನೇ ಪ್ರಶ್ನಿಸಿದನು:

'ರಾಮನೆಲ್ಲಿ? ಲಕ್ಷ್ಮಣನೆಲ್ಲಿ? ದೇವಿ ಸೀತೆಯನ್ನು ಎಲ್ಲಿಗಟ್ಟಿದೆ ಹೇಳು? ನೀಚಳೆ ತಂದೆಯನ್ನು ಏಕೆ ಕೊಂದೆ ಹೇಳು?'

ಕುಬ್ಜೆ ಮಂಥರೆ ತಲೆ ಎತ್ತಿ ಏನೋ ಹೇಳಲು ಪ್ರಯತ್ನಿಸುವಷ್ಟರಲ್ಲಿ ಮತ್ತೆ ಪ್ರಶ್ನೆ ಮಾಡಿದನು.

'ಹೇಳು, ಹೇಳು. ರವಿಕುಲದ ಸುಖವನ್ನೇಕೆ ತಿಂದೆ? ಮೃತ್ಯು ಸ್ವರೂಪಿಣಿ, ಓ ನಾಯಿ, ಭೂಕಂಪದಂತೆ ಮನು ನಗರಿಯನ್ನು ಮಣ್ಣು ಗೂಡಿಸಿದೆ. ಪಾತಕಿ, ನಿನಗೂ ಅದೇ ಗತಿಯಾಗುವುದು ನೋಡು' ಎಂದು ಹೇಳಿ ಅವಳ ಕೂದಲನ್ನು ಹಿಡಿದು ಕಲ್ನೆಲದ ಮೇಲೆ ಕುಕ್ಕಿದನು. ಗೂನು ಬಿರಿಯುವಂತೆ ಬಡಿದನು. ಅವಳ ಕರ್ಕಶ ಚೀತ್ಕಾರ ಮೌನ ಶಿಲೆಯಂತಿದ್ದ ಕೈಕೆಗೆ ಗರಗಸದಿಂದ ಸೀಳಿದಂತಾಯಿತು.

ತಾಯಿಯನ್ನು ಸಂತೈಸಿ ಬರುತ್ತಿದ್ದ ಭರತನು ತನ್ನ ಹೆಸರನ್ನು ಕೂಗಿ ಕರೆಯುತ್ತಿದ್ದುದ್ದನ್ನು ಕೇಳಿದ. ಮನ ಕರಗಿತು. ಕರುಳು ಹಿಂಡಿದಂತಾಯಿತು. ಕರುಣೆ ಕೊರೆಯಿತು. ಕೂಸಾಗಿದ್ದಾಗಿನಿಂದ ದೊಡ್ಡವನಾಗುವವರೆಗೆ ತಾಯಿಗಿಂತ ಹೆಚ್ಚಾಗಿ ತನ್ನನ್ನು ಪ್ರೀತಿಯ ತೊಟ್ಟಿಲಲ್ಲಿಟ್ಟು ಜೋಗುಳ ಹಾಡಿ ಬೆಳೆಸಿದವಳು ಮಂಥರೆ. ಅವಳ ಗೋಳಿನ ದನಿ ಕೇಳಿ ಕರುಳಿರಿದಂತಾಗಿ ಓಡಿ ಬಂದ! ಅಲ್ಲಿ ಶತ್ರುಘ್ನ ಅವಳನ್ನು ಬಡಿಯುತ್ತಿರುವುದು ಕಂಡ. ನೆನಹು ಮರುಕಳಿಸಿತು. ತಮ್ಮೆಲ್ಲ ದುರಂತಕ್ಕೆ ಅವಳೇ ಕಾರಣ ಎಂದು ಭಾವಿಸಿದ. ಕರುಣೆ ಕೋಪಕ್ಕೆ ಹೊರಳಿ ಗುರಿ ಬೇರೆಯಾಯಿತು.

ಅವಳು ಪ್ರೇಮ ರಾಹುವಿನಂತೆ ಕೈ ನೀಡಿ ಬರುತ್ತ 'ಅಯ್ಯೋ ದಮ್ಮಯ್ಯ, ಬಾರಣ್ಣಯ್ಯ, ರಕ್ಷಿಸೋ' ಎಂದು ಕೇಳಿಕೊಂಡಳು. ಕಹಿಯನ್ನು ನೆಕ್ಕಿದ ನಾಲಗೆಯಂತೆ ಜಡವಾದ ಭರತನು,

'ಎಲೆ ಕುರೂಪಿ, ತೊಲಗು. ಕಣ್ಣೆದುರಿಂದ ತೊಲಗು ಪಾಪಿ! ಹತ್ತಿರ ಬರಬೇಡ. ಅಯ್ಯೋ, ಪ್ರೀತಿಯ ಹುತ್ತದಲ್ಲಿ ಹಗೆಯ ವಿಷಸರ್ಪ ಹೊರಬಂದು ಕಚ್ಚಿತು ಎಂಬುದನ್ನು ಹೇಗೆ ನಂಬಲಿ? ನಿನ್ನಲ್ಲಿ ಇಂದಿನವರೆಗೂ ವಿರೂಪವನ್ನು ಕಂಡಿರಲಿಲ್ಲ. ಆದರೆ ಇಂದು ಕುರೂಪತೆಯ ಪೈಶಾಚಿಕತೆ ಕರ್ಕಶವಾಗಿ ಹಲ್ಲು ಕಿರಿದು ನಿಂತಿದೆ! ನಿಜ, ವಿಕಾರ ಮನಸ್ಸಿಗಲ್ಲದೆ, ಹೊರ ಮೈಗೆ ಅಲ್ಲ. ಹೆತ್ತವಳನ್ನೆ ಕೆಟ್ಟ ಬಯಕೆಯಿಂದ ನೋಡುವ ಕಣ್ಣುಗಳನ್ನು ಕಿತ್ತೆಸೆಯುವವನಂತೆ ಮಂಥರೆ, ನಿನ್ನನ್ನು ಎಂದಿಗೂ ತ್ಯಜಿಸಿದ್ದೇನೆ. ನೀರನ್ನು ತಿರಸ್ಕರಿಸಿ ಹೊರಬಂದ ತಾವರೆಗೆ ರವಿ ಹೇಗೆ ವೈರಿಯೋ, ರಾಮನನ್ನು ಹೊರ ಹಾಕಿದ ನೀನು ನನಗೆ ವೈರಿ' ಎಂದು ಹೇಳಿ, ಶತ್ರುಘ್ನನ ಕಡೆ ತಿರುಗಿ,

'ಸೋದರನೆ ಹೊಡೆಯಬೇಡ, ನಿಲ್ಲಿಸು. ಹೆಣ್ಣಿನ ಕೊಲೆ ಅಣ್ಣನಿಗೆ ಮೆಚ್ಚಿಗೆಯಲ್ಲ. ಕೋಪವನ್ನು ಬಿಡು. ನಾಯಿಯನ್ನು ಬಡಿದರೆ ಅದು ಕಚ್ಚಿದ ಗಾಯ ವಾಸಿಯಾಗುವುದೆ? ನಡೆ, ದೊಡ್ಡಮ್ಮನ ಮನೆಗೆ ಹೋಗೋಣ' ಎಂದು ಹೇಳಿದ. ಅವರಿಬ್ಬರು ಕೌಸಲ್ಯೆಯೆಡೆಗೆ ಹೋದರು.

ಮಂಥರೆ ಕೇಕಯ ರಾಜನ ಅರಮನೆಯಿಂದ ಇದುವರೆಗೆ ತಿರಸ್ಕಾರ, ಅವಮಾನ, ಅಪಮಾನಗಳಲ್ಲೆ ಉಸಿರಾಡಿದ್ದಳು. ಆದರೆ ಅದು ಯಾವುದರಿಂದಲೂ ಘಾಸಿಗೊಂಡಿರಲಿಲ್ಲ. ಆದರೆ ತನ್ನ ಪ್ರೇಮದ ಭಾವ ಗೋಪುರ ಕುಸಿಯಲು ಸಿಡಿಲು ಬಡಿದಂತೆ ನೆಲದ ಮೇಲೆ ಬಿದ್ದಳು. ರವಿ ಆಕರ್ಷಣೆ ತಪ್ಪಿದ ಭೂಮಿ ನೀಲ ಶೂನ್ಯಕ್ಕೆ ಉರುಳುವಂತೆ ಭರತನ ಪ್ರೀತಿಯನ್ನು ಆದರಿಸಿದ್ದ ಕುಬ್ಜೆಯ ಆತ್ಮವು ಬುಡಗೆಟ್ಟು ಉರುಳಿತು. ಭರತನ ಕೋಪವೆಂಬ ಗ್ರಹಕ್ಕೆ ಬಡಿಯಲು ಅವಳು ಪುಡಿಪುಡಿಯಾಗಿ ಬೂದಿಯಾದಳು.

ಗೂನಿ ಮಂಥರೆ ತನ್ನ ಯಾವ ಪುರುಷಾರ್ಥ ಸಾಧನೆಗೆ, ಸಂಪತ್ತಿಗೆ, ಸುಖಕ್ಕಾಗಿ ಕೈಕೆಗೆ ಉಪದೇಶ ನೀಡಿದಳು? ಅವಳು ಹುಟ್ಟಿದಾಗಿನಿಂದ ಪರರ ಚೆಲುವಿನಲ್ಲಿ ತನ್ನ ಚೆಲುವನ್ನು ಕಂಡವಳು. ಇತರರ ಸುಖದಲ್ಲಿ ತನ್ನ ಸುಖ ಕಂಡವಳು. ಅದನ್ನೇ ಉಂಡುಟ್ಟು ಉಸಿರಾಡಿದವಳು. ಆ ದಾಸಿ ತನ್ನ ನೆಚ್ಚಿನ ಒಡತಿಗೆ ಮತ್ತು ಅವಳ ಮೆಚ್ಚಿನ ಮಗನಿಗೆ ಒಳ್ಳೆಯದನ್ನು ಮಾಡುತ್ತೇನೆಂದು ಸಲಹೆ ನೀಡಿದಳು. ಅವಳ ಆ ಪರಾರ್ಥತೆಯ ಶುದ್ಧ ನಡೆಯಲ್ಲಿ ಸ್ವಾರ್ಥ ದೋಷಕ್ಕೆ ಎಡೆಯಿದೆಯೆ?

* * *

ಮಂಥರೆ ಮೂರ್ಛೆಯಿಂದ ಎಚ್ಚತ್ತು ನೋಡಿದಳು. ಅವಳಿಗೆ ಆ ಅರಮನೆಯ ನಿರ್ಜನ ನೀರವ ಶೂನ್ಯತೆಯು ಕೊರಳಿಗೆ ಹಾಕಿದ ಸರ್ಪ ಪಾಶವಾಗಿ ಕಂಡಿತು. ಸದ್ದಿಲ್ಲದೆ ಅರಮನೆಯು ನಿಶ್ಶಬ್ದತೆಯ ಶವಕ್ಕೆ ಹೆಗ್ಗೋರಿಯಂತಿದ್ದು – ಅವಳನ್ನು ಅಪಹಾಸ್ಯಗೈಯ್ಯುವಂತೆ ಕಾಣುತ್ತಿತ್ತು. ಅವಳು ನಿಶ್ಶಬ್ದತಾ ಶವದಂತೆ ಮೇಲೆದ್ದಳು. ಗೋರಿಯಿಂದೇಳುವ ಪ್ರತೀಕಾರ ಪ್ರೇತದ ಭೀಷಣಾಕೃತಿಯಂತೆ ನಿಟ್ಟುಸಿರು ಬಿಡುತ್ತ ಎದ್ದು ಕುಳಿತಳು. ತನ್ನ ವಿಷವನ್ನು ತಾನೆ ಹೀರಲು ಬಯಸಿದ ಕಾಳಸರ್ಪಿಣಿಯಂತೆ ಮೇಲೆದ್ದಳು. ತನ್ನ ತಪ್ಪಿಲ್ಲದೆ ತನ್ನ ಕುರೂಪದಿಂದಾಗಿ ಜನರ ಪ್ರೇಮದಿಂದ ವಂಚಿತಳಾದ ಮುಗ್ಧ ಮಂಥರೆ ಆತ್ಮಶೋಧಕ್ಕೆ ತೊಡಗಿದಳು.

ತನ್ನ ಪ್ರೇಮದ ಕುವರ ಭರತನು ಮತ್ತೆ ಆನಂದದಿಂದಿರಲು ತಾನೇನು ಮಾಡಬಹುದು ಎಂದು ಆಲೋಚಿಸಿದಳು.

'ಹಾ ನನ್ನ ಕೈಕೆಯ ಮಗುವಿಗೆ, ನನ್ನ ಜೀವಾನಂದ ಸಾಗರ ಚಂದ್ರನಾದ ಭರತ ದೇವನಿಗೆ ನೆಲದ ಸಿರಿ ದೊರಕಲಿ, ಸುಖವಾಗಲಿ, ಅವನ ಮುಡಿಯನ್ನು ಸೂರ್ಯವಂಶದ ಮುಕುಟ ಅಲಂಕರಿಸಲಿ ಎಂದು ರಾಮನನ್ನು ಕಾಡಿಗೆ ಅಟ್ಟಿದೆನಲ್ಲವೆ? ಮತ್ತೆ ರಾಮನನ್ನು ಮನೆಗೆ ಕರೆತಂದರೆ ಕಂದ ಭರತನಿಗೆ ಸಂತೋಷವಾಗುತ್ತದೆ. ಕೈಕೆಗೆ ಉಲ್ಲಾಸವಾಗುತ್ತದೆ. ನನಗೂ ಹಿಂದಿನಂತೆ ಅವರ ಅಪಾರ ಪ್ರೀತಿಯ ಔತಣ ದೊರೆಯುತ್ತದೆ' ಎಂದುಕೊಂಡಳು. ಪುಣ್ಯವನ್ನು ಹುಡುಕಿಕೊಂಡು ಹೋಗುವ ಪಾಪದಂತೆ ರಾಮನನ್ನು ಹುಡುಕಿಕೊಂಡು ಹೋದಳು.

ರಾಜನ ಅಂತ್ಯ ಸಂಸ್ಕಾರದ ನಂತರ ಪ್ರೇತವನದ ಕಡೆಯಿಂದ ಹೊರಬಿದ್ದ ಜನ ಅವಳನ್ನು ಗುರುತಿಸಿ ಕಲ್ಲು ಮಣ್ಣುಗಳಿಂದ ಹೊಡೆದರು. ಕೆಲವರು ಮುಖದ ಮೇಲೆ ಉಗುಳಿದರು.

ಹರಿದ ಬಟ್ಟೆ, ರಕ್ತ ಸೋರುತ್ತಿದ್ದ ಗಾಯಗಳ, ನಶಿಸಿದ ಮೂಳೆ, ಸುಕ್ಕುಗಟ್ಟಿದ ಚರ್ಮ, ನೆರೆತ ಕೂದಲಿನ ಆ ಗೂನಿ ತೊನ್ನಿಯು ಜನಗಳ ಅನ್ಯಾಯ ಕ್ರೌರ್ಯಗಳನ್ನು ಲೆಕ್ಕಿಸದೆ ಸಂಜೆಯೊಡಗೂಡಿ ಅಯೋಧ್ಯೆಯಿಂದ ಹೊರಗೆ ನಡೆದಳು.

ಜೀವನದಲ್ಲಿ ದ್ವೇಷ, ನಿಷ್ಠುರ, ವೈರಗಳಿಗೆಲ್ಲ ಪ್ರೇಮವೇ ಪಿತಾಮಹನಲ್ಲವೆ? ಅಮೃತಕ್ಕಾಗಿ ಕಡಲನ್ನು ದೇವ ದಾನವರು ಕಡೆಯಲು ವಿಷ ಸೃಷ್ಟಿಯಾಯಿತಲ್ಲವೆ?

ಮಂಥರೆಯು ತನ್ನ ಹೃದಯ ಕಮಲದಲ್ಲಿ ರಘುರಾಮಚಂದ್ರನನ್ನು ಇರಿಸಿಕೊಂಡು ನಡೆಯುತ್ತಿರಲು ರಾತ್ರಿಯ ಕತ್ತಲು ಭುವಿಯನ್ನು ಆವರಿಸಿತು. ಅವಳ ಚಿತ್ತಕ್ಕೆ ಮರುಳುತನ ಸೇರಿಕೊಂಡಿತು.

ಬೆಳಗಿನಿಂದ ಏನೂ ತಿಂದಿಲ್ಲ. ನೀರನ್ನೂ ಕುಡಿದಿಲ್ಲ. ಹೊಡೆತವಲ್ಲದೆ ಬೇರೇನೂ ತಿಂದಿಲ್ಲ. ಕಣ್ಣೀರಲ್ಲದೆ ಏನನ್ನೂ ಕುಡಿದಿಲ್ಲ. ಬೆನ್ನಿಗಂಟಿದ ಹೊಟ್ಟೆಯ ಹಸಿವಿನಿಂದ, ನೀರಡಿಕೆಯಿಂದ ಗಂಟಲು ಒಣಗಿದೆ. ಗಾಯಗಳಿಂದ ರಕ್ತ ಬಸಿದು ನೋವಾಗಿದೆ. ಆ ದುಸ್ಥಿತಿಯ ದುಃಖದಿಂದ ಮೇಲುಸಿರು ಬಿಡುತ್ತಿರಲು ಅವಳಿಗೆ ಪ್ರಜ್ಞೆ ತಪ್ಪುತ್ತಿದೆ. ಆದರೂ ಬಂಡೆಯಿಂದ ಬಂಡೆಗೆ ಒರಗಿ ನಡೆಯುತ್ತ ರಾಮನನ್ನು ಮತ್ತೆ ಕರೆತರುವ ವ್ರತವೊಂದೆ ಊರುಗೋಲಾಗಿ 'ರಾಮಾ ರಾಮಾ' ಎಂದು ಕೂಗುತ್ತ ವೃದ್ಧೆ ಅಲೆದಾಡಿದಳು. ಅವಳ ದಣಿದ ಉಸಿರಿಗೆ ದನಿ ಹೊಮ್ಮದಿರಲು ನಿಶ್ಶಬ್ದ ರಾತ್ರಿಯ ನಿದ್ದೆ ಕೆಡಲಿಲ್ಲ. ಅವಳ ಕೂಗನ್ನು ಕಾಡು ಕಿವುಡಾಗಿ ಕೇಳಿತು.

'ಓ ನನ್ನ ಭರತನಣ್ಣಯ್ಯ! ಓ ರಾಮಯ್ಯ! ದಮ್ಮಯ್ಯಾ! ಹೇಳು ಎಲ್ಲಿರುವೆ ಅಯ್ಯಾ' ಎಂದು ಮತ್ತೆ ಮತ್ತೆ ಕೂಗುತ್ತ, ತನ್ನ ಕರುಣ ಧ್ವನಿಯ ಛಂದಸ್ಸಿಗೆ ಎಂಬಂತೆ ಹೆಜ್ಜೆ ಇಡುತ್ತ ಸಾಗಿದಳು. ಅವಳಿಗೆ ರಾಮನನ್ನು ಹುಡುಕುವಾಗಲೂ ಭರತನೇ ಮುಖ್ಯವಾಗಿದ್ದ. ಅವಳ ಆ ಆರ್ದ್ರ ಹೃದಯ ಪರಿವರ್ತನೆಯ ಪುಣ್ಯ ಸಂಕ್ರಾಂತಿ ಭೂಮಿಗೆ ಗೊತ್ತಾಗದ್ದಿದ್ದರೂ ಸಹಸ್ರ ನಕ್ಷತ್ರಗಳೇ ಕಣ್ಣಾದ ಬಾನಿಗೆ ತಿಳಿಯದಿರುವುದೆ?

ಗೂನಿಯ ಬಾಹ್ಯ ಪ್ರಜ್ಞೆ ಶೂನ್ಯತೆಯ ತೂಗುಯ್ಯಾಲೆಯಲ್ಲಿರುವಾಗ ಅವಳ ಕುರುಡುಗಣ್ಣಿಗೆ ದೂರದಲ್ಲಿ ಜ್ಯೋತಿ ಕಾಣಿಸಿತು. ಅದು ಅವಳ ಅಂತರಾತ್ಮಕ್ಕೆ ರಾಮನೆ ಎನಿಸಿತು. ಅವಳಿಗೆ ಅವನು ಬರಿ ರಾಮ ಅಲ್ಲ. ಅವನು ಭರತನ ಅಣ್ಣಯ್ಯ. ಆ ಅಣ್ಣಯ್ಯನಿಂದ ಅವನ ಬಾಳಿಗೆ ಬೆಳಕು ಎಂದು ಅರಿತ ಮಂಥರೆ ಆನಂದದಿಂದ ಗರಿಗೆದರಿ ಕುಣಿವ ನವಿಲಂತೆ ಕುಣಿದಳು. 'ಓ ನನ್ನ ಭರತನಣ್ಣಯ್ಯ! ಓ ರಾಮಯ್ಯ! ದಮ್ಮಯ್ಯಾ! ಹೇಳು ಎಲ್ಲಿರುವೆ ಅಯ್ಯಾ' ಎಂದು ಕೂಗುತ್ತ ಕಾಡುಗಿಚ್ಚನ್ನು ರಾಮನೆಂದು ಭಾವಿಸಿದಳು. ಅದರೊಳಕ್ಕೆ ನುಗ್ಗಿದಳು.

ಆ ಕಾಡುಗಿಚ್ಚು ಘೋರಾಂಧಕಾರದ ಮಧ್ಯೆ ಪ್ರವಹಿಸುವ ದೈತ್ಯಾಕಾರದ ಮಿಂಚಿನಂತಿತ್ತು. ಅದು ತನ್ನ ಕೇಸರಿ ಬಣ್ಣದ ಜ್ವಾಲೆಗಳನ್ನು ಎಲ್ಲೆಡೆ ಹರಡಿತ್ತು. ಬೆಂಕಿಯ ಕಣ್ಣುಗಳಂತೆ ಸಿಡಿದೇಳುವ ಕೆಂಗಿಡಿಗಳಿಂದ ಬೃಹತ್ ಕೆಂಡದ ತಾರೆಗಳ ಧಾರೆಯನ್ನು ಹರಿಸಿತು. ಆ ದಾವಾಗ್ನಿ ತನ್ನ ಬಕಾಸುರ ಮತ್ತು ಭೀಮನಂತಹ ತೋಳುಗಳಿಂದ ದೈತ್ಯ ಹಿಡಿಂಬಾಕಾರದ ಮರಗಳನ್ನು ನಿರಿನಿರಿ ನಿಟಿಲೆಂದು ಮುರಿದು ಅರೆದು ಬೂದಿ ಮಾಡಿ ಮುಕ್ಕಿತು. ಕಾಡೆಲ್ಲವನ್ನು ನುಂಗಿ ನೊಣೆಯುತ್ತ, ನಾಡೆಲ್ಲವನ್ನು ನೆಕ್ಕುತ್ತ, ಪರ್ವತ ಪ್ರದೇಶದ ಮೃಗ ಪಕ್ಷಿಗಳ ಸೊಗಸಾದ ಜೀವಕ್ಕೆ ಧಕ್ಕೆ ತಂದಿತು. ಅವುಗಳನ್ನು ಚೀರಿಸುತ್ತ, ಕೊಲ್ಲುತ್ತ, ಮೆಲ್ಲುತ್ತ ಅದು ಪ್ರಳಯಕಾಲದ ಸರ್ಪದ ಅಗ್ನಿ ಶರೀರವು ಲಯ ಭೋಜನಕ್ಕೆ ಚಾಚಿದ ಶತಕೋಟಿ ಯೋಜನದ ಮಿಂಚಿನ ಮಹಾ ನಾಲಗೆಯಂತೆ ಮುಂದುವರಿಯಿತು. ಹಾಗೆ ಬಂದು ಅಪ್ಪಳಿಸಿದ ಅಗ್ನಿಗೆ ಮಂಥರೆಯ ಮೂರ್ತಿಯು – ಅಯ್ಯೋ, ಚಿಟ್ಟೆ ಸೀದಂತೆ ಸೀದು ಹೋಯಿತು.



2

# ಶಬರಿ

ಒಂದು ಬೆಳುದಿಂಗಳ ರಾತ್ರಿ ಮುದುಕಿ ಶಬರಿ ಕನಸೊಂದನ್ನು ಕಂಡಳು. ಅದು ಮುಪ್ಪು ಯೌವನದ ಕನಸು ಕಾಣುವಂತಿತ್ತು. ಸುಂದರ ಭಾವದ ನಡುರಾತ್ರಿಯಲ್ಲಿ ಹುಲ್ಲುಹಾಸಿನ ಮೇಲೆ ಎದ್ದು ಕುಳಿತಳು. ತಾನು ಕನಸಿನಲ್ಲಿ ಕಂಡ ಆಕಾಶ ನೀಲವರ್ಣದ ಶ್ರೀಮೂರ್ತಿಯನ್ನು ಮನದಲ್ಲಿ ಚಿತ್ರಿಸಿಕೊಂಡಳು. ಕಲ್ಪನೆಯ ರೂಪು ಆ ವೃದ್ಧೆಯ ಎದೆಯನ್ನು ತುಂಬಿ ತುಳುಕಾಡಿಸಿತು. ಮುಖದಲ್ಲಿ ಹರ್ಷ ಉಕ್ಕಿ ಸುಕ್ಕು ತೆರೆ ತೆರೆಯಾಯಿತು. ಪುಂಡಿನಾರಿನಂತೆ ಬಿಳಿದಾದ ನೆರೆತ ತಲೆಯ, ಹಲ್ಲಿಲ್ಲದ ಬಚ್ಚು ಬಾಯಿಯ, ಬಾಗಿದ ಬೆನ್ನಿನ ಹಣ್ಣು ಅಜ್ಜಿ ನಡುಗುತ್ತ ನಡೆದಳು. ಗುಡಿಸಲ ಬಾಗಿಲನ್ನು ತೆರೆದು ನೋಡಿದಳು.

ಆ ಚಂದ್ರ ಸುಂದರ ರಾತ್ರಿಯು ಮುದುಕಿಯನ್ನು ಕಂಡು ಕನಿಕರದಿಂದ ಕರಗಿತು ಎಂಬಂತೆ ತಿಂಗಳ ಬೆಳಕನ್ನು ಚೆಲ್ಲಿತು. ಶಬರಿಯ ಕುಟೀರದ ಸುತ್ತಲೂ ಹಬ್ಬಿದ ಹಸುರುಹುಲ್ಲು ಬೆಳುದಿಂಗಳಲ್ಲಿ ಮಿಂದು ಆ ವೃದ್ಧೆಯ ತಲೆಯಂತೆ ಬಿಳುಪಾಗಿ ತೃಣಮೌನಿಯಾಗಿತ್ತು!

ಅವಳು ಮಂಗಳ ಮೂರ್ತಿಯನ್ನು ಕಾಣುವ ಹಂಬಲದಿಂದ ವಿಸ್ತಾರವಾದ ಬಯಲನ್ನು ದಿಟ್ಟಿಸಿ ನೋಡಿದಳು. ಅದರಲ್ಲಿ ಮನಸ್ಸು ಲಯವಾದಂತೆ ನಿಟ್ಟುಸಿರುಬಿಟ್ಟಳು. ತನ್ನೊಳಗೆ ಹೀಗೆಂದುಕೊಂಡಳು:

‘ಓ ನನ್ನಯ್ಯ, ಕಂದ ರಾಮಚಂದ್ರಯ್ಯ, ನೀನೆಂದಿಗೆ ಬರುವೆ? ಗುರುದೇವ ಮಾತಂಗ ಮುನಿಯ ಮಾತು ಸುಳ್ಳಾಗುವುದೆ? ವತ್ಸನೆ ನಿನಗಾಗಿ ಹತ್ತು ವರ್ಷಗಳಿಂದ ಕಾಯುತ್ತಿರುವೆ. ನನ್ನ ಆಶ್ರಮವು ಹಣ್ಣು ಹಂಪಲುಗಳನ್ನು ಬಿತ್ತಿ ಬೆಳೆದು ಅಣಿಗೊಂಡು ಕಾಯುತ್ತಿದೆ. ಓ ನನ್ನ ಇಷ್ಟಮೂರ್ತಿ, ನೀನು ಬರುವ ಮೊದಲೇ ಈ ಕಾಯವು ಅಳಿಯುವ ಶಂಕೆಯಿಂದ ಮನಸ್ಸು ನೋಯುತ್ತಿದೆ. ಹಣ್ಣು ಹಣ್ಣಾದ ಈ ಮುದಿ ದೇಹ ಇನ್ನೆಷ್ಟು ಕಾಲ ತಾಳಬಲ್ಲುದು? ಬಾಳ ಬಲ್ಲುದು? ಉಳಿದರು ತಾನೆ ಏನು? ಕಣ್ಣು ಆಗಲೆಯೆ ಮಬ್ಬಾಗಿ ಮಂಜಾಗಿದೆ; ದೃಷ್ಟಿ ಮಂದವಾಗಿದೆ. ಕಣ್ಣು ಕಾಣದಾದ ಮೇಲೆ ನೀನು ಬಂದರೆ, ನಿನ್ನನ್ನು ಕಣ್ಣಾರೆ ನೋಡಲು ಹೇಗೆ ಸಾಧ್ಯ? ಕೈಯಿಂದ ನಿನ್ನ ಮೈದಡವಿ ಸಂತೋಷ ಪಡುವೆನಷ್ಟೆ. ಕಣ್ಣಿನ ಬಯಕೆಯನ್ನು ತೃಪ್ತಿಪಡಿಸಲಾಗುವುದಿಲ್ಲ.

‘ಓ ಕಂದಯ್ಯಾ, ಕಣ್ಣು ಕೆಡುವ ಮೊದಲೆ, ಬಾಳು ಕೆಡುವ ಮೊದಲೆ ಬಾರಯ್ಯ ನನ್ನೆದೆಗೆ ಕಾಂತಿಯನ್ನು ತಾರಯ್ಯ!’

ಇರುಳಿನ ನಿಶಬ್ದತೆಗೆ ಭಂಗ ಬಾರದ ರೀತಿಯಲ್ಲಿ ತನ್ನೊಳಗೆ ತಾನೇ ಮಾತಾಡಿಕೊಂಡು ಗುಡಿಸಿಲಿನ ಒಳಗೆ ಹೋದಳು.

ರಾತ್ರಿ ಕಳೆದು ಬೆಳಗಾಯಿತು. ಶಬರಜ್ಜಿಗೆ ಏನೋ ಕಳವಳ ಏನೋ ತಲ್ಲಣ, ಏನೋ ಉಲ್ಲಾಸ. ಪರ್ಣಕುಟಿಯ ಒಳಗೆ ಹೋಗುತ್ತಾಳೆ, ತಕ್ಷಣ ಹೊರಚಿಮ್ಮಿ ಬಂದು ನಿಲ್ಲುತ್ತಾಳೆ. ಭೂಮಿಯ ಬಯ್ತಲೆಯಂತೆ ಬಯಲ ನಡುವೆ ಸವೆದ ಕಾಲುದಾರಿಯನ್ನೆ ದಿಟ್ಟಿಸಿ ನೋಡುತ್ತಾಳೆ. ತನ್ನೊಳಗೆ ಗೊಣಗಿಕೊಂಡು ಗುಣಿಸುತ್ತಾಳೆ. ಒಳಕ್ಕೆ ಹೋಗಿ ತೆಂಗಿನಗರಿಯ ಪೊರಕೆತಂದು, ಮುಂದೆ ಗುಡಿಸುತ್ತಾಳೆ. ಸೊಂಟಗೈಯಾಗಿ ನಿಲ್ಲುತ್ತಾಳೆ. ಮತ್ತೆ ಬೈತಲೆಯಂತಿದ್ದ ಕಾಡುದಾರಿಯನ್ನು ದಿಟ್ಟಿಸುತ್ತಾಳೆ. ಹೀಗೆ ಆ ಅಜ್ಜಿ ನಿರೀಕ್ಷೆಯ ನೋಂಪಿಯಲ್ಲಿರಲು ಹೊತ್ತೇರಿತು. ನಡುಹಗಲಾಯಿತು.

ಹುಲ್ಲುಗಾವಲಿನ ನಡುವೆ ಯಾರೊ ಬರುತ್ತಿರುವಂತೆ ಶಬರಿಗೆ ಭ್ರಮೆ ಯುಂಟಾಯಿತು. ಸೊಂಟಕ್ಕೆ ಒಂದು ಕೈ ಇಟ್ಟು, ಹಣೆಗೊಂದು ಕೈಯೆತ್ತಿ ಹುಬ್ಬೇರಿಸಿ ವೀಕ್ಷಿಸಿದಳು. ಅವಳು ಸಂದೇಹಗೋಡು, ಬರುವವರನ್ನು ನೆಟ್ಟಕಣ್ಣುಗಳಿಂದ ಮತ್ತೆ ಮತ್ತೆ ನೋಡಿದಳು. ರಾಮಲಕ್ಷ್ಮಣರನ್ನು ಅವರ ದುಸ್ಥಿತಿಯ ವೇಷದಲ್ಲಿ ಗುರುತಿಸಲಾರದಾದಳು.

ಭಗವಂತನು ಭಕ್ತ ನಿರೀಕ್ಷಿಸಿದ ರೂಪದಿಂದ ಬರುತ್ತಾನೆಯೆ, ಸುಖದ ರೂಪದಲ್ಲಿ ಅಪೇಕ್ಷಿಸಿದರೆ ದು:ಖದ ರೂಪದಲ್ಲಿ ಮೈದೋರುತ್ತಾನೆ.

ಕೆದರು ತಲೆ, ಕೊಳೆ ಬೆವರು ಮೆತ್ತಿದ ಉಡುಗೆ, ತೇಜಸ್ಸು ಮಾಸಿದ ಮುಖ, ಖಿನ್ನತೆಯ ನೇಗಿಲು ಉತ್ತಿದಂತಿದ್ದ ಕಪೋಲ, ಪತ್ನಿಯ ವಿರಹದ ಅಗ್ನಿಗೆ ಉರುವಲಾದ ಶರೀರದ – ರೂಕ್ಷ ರೂಪದ ರಾಮನು ಮಂದ ದೃಷ್ಟಿಯ ಶಬರಿಗೆ ಬೇಡನಂತೆ ಕಂಡು ಬಂದನು.

ರಾಮಲಕ್ಷ್ಮಣರು ಹಿಂದಿನ ದಿನ ರಾಕ್ಷಸ ಕಬಂಧನನ್ನು ಸಂಹರಿಸಿದ್ದರು. ಅವನ ಮೈಯಿಂದ ಉದ್ಭವಿಸಿದ ಓರ್ವ ದೇವತೆಯು ಶಬರಿಯ ಆಶ್ರಮದ ಕಡೆ ಸಾಗಲು

ತಿಳಿಸಿದನು. ಅವರು ಆ ಮಾರ್ಗ ಹಿಡಿದು ಅಲ್ಲಿಗೆ ಬಂದಿದ್ದರು. ಬಿಲ್ಲುಬಾಣಗಳನ್ನು ಹಿಡಿದಿದ್ದ ಅವರ ಆಗಿನ ಭೀಷಣಾಕೃತಿಯನ್ನು ನೋಡಿದ ಶಬರಜ್ಜಿಯು ಅವರು ರಾಮ ಲಕ್ಷ್ಮಣರಲ್ಲ ಎಂದು ಬೇಸರಗೊಂಡಳು. 'ಕೋಗಿಲೆಯ ಮರಿಯೆಂದು ಹಿಡಿದರೆ ಕಾಗೆಯ ಮರಿ ಕೂಗಿದ ಹಾಗಾಯಿತು' ಎಂದು ಅವರನ್ನು ತನ್ನ ಯಾರೋ ಬೇಡನಂಟರೆಂದು ತಿಳಿದಳು. ಅವಳ ಉತ್ಸಾಹ ಕುಗ್ಗಿತು. ಕುತೂಹಲದಿಂದ ನೋಡುತ್ತಿದ್ದ ಅಜ್ಜಿಯನ್ನು ಲಕ್ಷ್ಮಣನು ಹೀಗೆ ಕೇಳಿಕೊಂಡನು:

'ಅಜ್ಜಿ ದಣಿದು ಬಂದಿದ್ದೇವೆ. ಗುಡಿಸಲೊಳಗೆ ಸ್ವಲ್ಪ ಜಾಗವನ್ನು ನೀಡಿ. ತಿನ್ನಲು ಏನಾದರೂ ಕೊಡಿ. ಈ ಪರದೇಶಿ ಕಂದರ ಮೇಲೆ ಕರುಣೆ ತೋರಿ. ನಾವು ಚಿರಋಣಿಗಳಾಗಿರುತ್ತೇವೆ'.

'ಕಂಡಕಂಡವರಿಗೆಲ್ಲ, ಬರುವ ಬೇಡರಿಗೆಲ್ಲ ಜಾಗಕೊಟ್ಟು ಊಟ ಕೊಡಲು ನಾನೇನು ಅಡುಗೂಳಜ್ಜಿ ಅಲ್ಲ ಕಣಯ್ಯ!' ಎಂದು ನಿಷ್ಠುರವಾಗಿ ಹೇಳಿದರೂ ಆ ಅಜ್ಜಿಗೆ ಅವರನ್ನು ನೋಡಿ ಮನಸ್ಸು ಕರಗಿತು. 'ಬನ್ನಿ, ನಾನು ಬಡವಳು. ಇದ್ದುದನ್ನು ಕೊಡುತ್ತೇನೆ'. ಅಂದಳು.

ವೃದ್ಧೆಯ ಮಾತಿಗೆ ಅವರಿಬ್ಬರೂ ನಸುನಗುತ್ತ, ಅವಳೊಡನೆ ಪರ್ಣಶಾಲೆಯ ಒಳಗೆ ಹೋದರು.

ಉರಿಬಿಸಿಲ ಝಳದಿಂದ ಗುಡಿಸಲೊಳಗೆ ಬಂದ ಸ್ವಲ್ಪ ಸಮಯದ ನಂತರ, ಶಬರಿಯ ಕಣ್ಣು ತಂಪಾಗಿ ಶಾಂತಿಯನ್ನು ಪಡೆಯಿತು. ಅವಳು ಅಪರಿಚಿತ ಅತಿಥಿಗಳನ್ನು ಮತ್ತೆ ನೋಡಿದಳು. ಅನುಮಾನದ ದನಿಯಲ್ಲಿ ಪ್ರಶ್ನಿಸಿದಳು:

'ಕಂದರಿರ ನೀವು ಯಾರು? ಎಲ್ಲಿಯವರು? ನನ್ನ ಕಣ್ಣು ಮಂಜಾಗಿದೆ. ಮನಸ್ಸಿಗೆ ಮಂಕು ಕವಿದಿದೆ. ಏನೂ ಸರಿಯಾಗಿ ತಿಳಿಯದಾಗಿದೆ'.

'ಅಜ್ಜಿ, ಮನೆಯಿಲ್ಲ ಮಾರಿಲ್ಲ; ಮನೆಗೆಟ್ಟು ಕಾಡು ಬೀಡಾದವರು ನಾವು. ತಾಯಿ, ಇಲ್ಲಿ ಎಲ್ಲಾದರೂ ಸ್ನಾನಕ್ಕೆ ಕೊಳವಿದೆಯೆ?'

ಎಂದು ಊರ್ಮಿಳೇಶನು ಉತ್ತರಿಸಲು ಆ ತಪಸ್ವಿನಿ ಸ್ನಾನ ಪದ ಕೇಳಿ ಆಶ್ಚರ್ಯಗೊಂಡಳು. 'ಬೇಡರಿಗೇಕೊ ಸ್ನಾನ' ಎಂದು ಮನದಲ್ಲಿ ಅಂದುಕೊಂಡಳು. ಪ್ರಕಟವಾಗಿ ಹೀಗೆ ಹೇಳಿದಳು: 'ಆ ಪೇರಳೆ ಮರದ ಅಡಿಯಲ್ಲಿ ಕೊಳವಿದೆ. ನಿಮ್ಮ ಹಾಗೆ ಮನೆ ತೊರೆದು, ನೆಲೆಗೆಟ್ಟು ತೊಳಲುವವರು ಈ ನಾಡಿನಲ್ಲಿ ಎಷ್ಟು ಜನರಿರುವರೋ? ಎಂಥಹ ಕೇಡಗಾಲವೋ ಏನೋ? ಧರ್ಮಘಾತುಕರು. ಓರ್ವನ ಸತಿಗೆ ಇನ್ನೋರ್ವ ಆಸೆಪಡುವನು!'

ಆ ನುಡಿ ಕಿವಿಗೆ ಬಿದ್ದೊಡನೆ ಬೆಚ್ಚಿದ ರಾಮಚಂದ್ರನು ಗುಡುಗಿದನು:

'ಅಜ್ಜಿ, ಯಾರ ಸತಿಯನ್ನು ಯಾರು ಬಯಸಿದರು?'

'ಹೋಗು ಮಗು, ಸ್ನಾನ ಮಾಡಿ ಬಾ. ಊಟವಾದ ಮೇಲೆ ಆ ಹೊಲಸು ಕಥೆ ಹೇಳುತ್ತೇನೆ'.

ಅವರು ಸ್ನಾನಕ್ಕೆ ಹೋದರು. ಅಜ್ಜಿಗೆ ಅವರ ಬಗ್ಗೆ ಕುತೂಹಲ ಹೆಚ್ಚಿತು. ಅವರ ಬಿದಿರ ಪೆಟ್ಟಿಗೆ, ಬಿಲ್ಲು ಬತ್ತಳಿಕೆ ಮತ್ತು ನಾರುಡೆಗಳನ್ನು ಮುಟ್ಟಿ ನೋಡಿದಳು. ಅಲ್ಲಿ ಪ್ರತಿಯೊಂದು ವಸ್ತುವನ್ನು ಸ್ಪರ್ಶಿಸಿ ನೋಡುವಾಗ ಬೆಚ್ಚುತ್ತ, ಆಶ್ಚರ್ಯಕ್ಕೊಳಗಾದಳು. ಆದರೆ ಅವಳ ಕಲ್ಪನೆಯ ರಾಮನನ್ನು ಆ ಬೇಡರಲ್ಲಿ ಕಾಣಲಿಲ್ಲ.

ಅಷ್ಟರಲ್ಲಿ ಸ್ನಾನ ಮಾಡಿ ರಾಮಲಕ್ಷ್ಮಣರು ಬಂದರು. ಕಪ್ಪಿಡಿದ ಚಿನ್ನವನ್ನು ಉಜ್ಜಿ ತೊಳೆದಂತಿತ್ತು ಅವರ ರೂಪು. ವೃದ್ಧೆಯ ಕುತೂಹಲ ಸೋಜಿಗದ ಸೂಜಿ ಮೊನೆಯನ್ನು ಏರಿತು! ಬೇಡರಿಗೆ ಇಂತಹ ತೇಜಸ್ಸು, ಆಕಾರ, ಮೃದು ಮಾತು, ನಯದ ನಡೆ ಸಾಧ್ಯವಿಲ್ಲ. ಇವರು ಯಾರೊ ದೊರೆಯ ಮಕ್ಕಳಿರಬೇಕೆಂದು ಭಾವಿಸಿದಳು. ಸೀತೆಯಿಲ್ಲದೆ ಬಂದ ಇವನು ರಾಮನಲ್ಲ ಎಂದು ತರ್ಕಿಸಿದಳು.

ಮತಂಗಮುನಿ ಶಿಷ್ಯೆಯು ಅವರಿಗೆ ಕುಳಿತುಕೊಳ್ಳಲು ಗೀಕು ಚಾಪೆ ಕೊಟ್ಟಳು. ನಳಿನಳಿಸುವ ಸುಳಿ ತಳಿರ ಕುಡಿ ಎಲೆಯನ್ನು ಹಾಸಿದಳು. ಹಸಿರುದೊನ್ನೆಗಳಲ್ಲಿ ನೀರು ಕೊಟ್ಟಳು. ಅಡಿಕೆಯ ಹೊಂಬಾಳೆಯಲ್ಲಿ ಕೆನೆಹಾಲು, ಜೇನು ತುಪ್ಪಗಳನ್ನು ತಂದಿಟ್ಟಳು. ನೂಲೆಗೆಣಸು, ಬಾಳೆಹಣ್ಣು, ಕಂದ ಮೂಲಗಳು, ಹಣ್ಣು ಹಂಪಲು; ಸೌತೆ ಪಚ್ಚಡಿ, ಅನಾನಸ್; ಹಸಿರು ಅಕ್ಕಿಯ ಬಿಸಿ ಅನ್ನ, ಮೊಸರು, ಬೆಲ್ಲ, ಬೆಣ್ಣೆಯನ್ನು ಬಡಿಸಿದಳು. ಉಪಚಾರದ ಸವಿನುಡಿಗಳೊಡನೆ ಮುಗುಳು ನಗುತ್ತ ಉಸುರಿದಳು:

'ಯಾರ ಸಂಪತ್ತು ಯಾರಿಗೊ? ನಿಮಗೆ ಸಲ್ಲಬೇಕಾದುದನ್ನು ಅವರಿಗೆ ಬಡಿಸಲು ಸಾಧ್ಯವೆ? ಮಕ್ಕಳೇ, ತೃಪ್ತಿಯಾಗುವ ಹಾಗೆ ಊಟ ಮಾಡಿರಿ. ಬಂದ ಅತಿಥಿಯಾರಾದರೇನು?'

'ಯಾರ ಸಂಪತ್ತು ಯಾರಿಗೆ ಹೇಳಜ್ಜಿ? ನಾವು ಉಣುತ್ತಿರುವ ಈ ಪುಣ್ಯ ಯಾರಿಗೆ ಮೀಸಲಾಗಿತ್ತು? ನಿನ್ನ ಬಯಕೆಯ ಅತಿಥಿ ನಿಶ್ಚಯವಾಗಿ ಪುಣ್ಯವಂತನೆ!'

'ಅವನು ದಶರಥಕುಮಾರ!'

ಅಜ್ಜಿಯ ಆತ್ಮೀಯ ಉದ್ಗಾರವನ್ನು ಕೇಳಿ ರಾಮಲಕ್ಷ್ಮಣರು ಒಬ್ಬರನ್ನೊಬ್ಬರು ನೋಡಿಕೊಂಡರು. ಮುದುಕಿಯನ್ನು ಕಣ್ಣರಳಿಸಿ ನೋಡಿದರು. ಶಬರಜ್ಜಿ ಉತ್ಸಾಹದಲ್ಲಿ ಮಾತು ಮುಂದುವರಿಸಿ 'ಅವನು ಲಕ್ಷ್ಮಣನ ಅಣ್ಣ, ಭೂಮಿಸುತೆಯ ಇನಿಯ' ಎಂದು ಹೇಳುವಾಗ ಆನಂದ ಉಕ್ಕಿ ಉಮ್ಮಳಿಸಿತು. ಕಣ್ಣಲ್ಲಿ ಹರ್ಷಬಾಷ್ಪ ತುಂಬಿ ಬಂದಿತು. 'ಕಂದರಿರ ಕಳೆದ ಹತ್ತುವರ್ಷಗಳಿಂದ ರಾಮ ಸೀತೆ ಲಕ್ಷ್ಮಣರಿಗಾಗಿ ಕಾಯುತ್ತಿದ್ದೇನೆ. ಪ್ರತಿ ದಿನವು ನಿಮಗಿಕ್ಕಿದ ಉಣಿಸನ್ನು ಅಣಿ ಮಾಡುತ್ತಿದ್ದೇನೆ. ಗುರುವಾಣಿ ಸುಳ್ಳಾಗುವುದೆ?' ಎಂದು ಅತ್ತಳು. ಮಾತಂಗಮುನಿ ಹೇಳಿದ ರಾಮಾಗಮನ ಪುಣ್ಯ ವಾರ್ತಾ ಭವಿಷ್ಯವನ್ನು ತಿಳಿಸಿದಳು. ಮತ್ತೆ ಅವರನ್ನು ಹೀಗೆ ಪ್ರಶ್ನಿಸಿದಳು.

'ಕುಮಾರರೇ, ನೀವು ಯಾರೊ ಉತ್ತರದ ಕಡೆಯವರಾಗಿ ಕಾಣುತ್ತಿರುವಿರಿ. ರಾಮ ಎಲ್ಲಿರುವನು, ಯಾವಾಗ ಬರುವನು ಎಂಬುದನ್ನು ಕೇಳಿರುವಿರಾ? ಬಾಳಿನ ಪಯಣ ಮುಗಿಸಿ ಹೋಗುವ ಮೊದಲು ಒಮ್ಮೆಯಾದರೂ ರಾಮನ ಸಿರಿಮೊಗದ ದರ್ಶನ ಆಗುವುದೆ? ಶಾಂತಿನಿಧಿಯಾದ ಆತನನ್ನು ಕಾಣುವುದೇ ಪರಮಶಾಂತಿ!'

ಶಬರಜ್ಜಿಯ ಆತ್ಮದಭಿಲಾಷೆ ಕೇಳುತ್ತ ರಾಮನ ನಯನಗಳಲ್ಲಿ ನೀರು ತುಂಬಿತು. ಗದ್ಗದಿತನಾಗಿ ನುಡಿದನು;

'ಅಜ್ಜಿ, ಶಾಂತಿನಿಧಿಯಾದ ಅವನು ಶಾಂತಿಯಿಲ್ಲದೆ ತೋಳಲಾಡುತ್ತಿರುವನಂತೆ. ಮನೆಗೆಟ್ಟು ಹೇರಡವಿಯೆ ಮನೆಯಾದವನನ್ನು ಶಾಂತಿನಿಧಿಯೆಂದು ಹೇಗೆ ವರ್ಣಿಸುವೆ ತಾಯಿ? ನಿನ್ನ ಪ್ರೀತಿಯ ಊಹೆಯು- ಸಾಮಾನ್ಯನನ್ನು ದೇವಮಾನ್ಯನೆಂದು ಬಗೆದಿದೆ!'

'ತೆಗೆ ತೆಗೆ! ಮಹಾತ್ಮನನ್ನು ತೆಗಳಬೇಡ!'

'ನಾನು ರಾಮನನ್ನು ಬಲ್ಲೆ!'

'ಆತನನ್ನು ನೀನು ಅರಿಯೆ!'

'ನನ್ನನ್ನು ನಾನು ಅರಿಯೆನೆ? ನನಗೆ ನಾನು ಗೊತ್ತಿಲ್ಲ ಎಂದು ಹೇಳುತ್ತಿರುವಿರಿ ತಾವು'.

ಶಬರಿ ಅಚ್ಚರಿಯ ಆಘಾತಕ್ಕೊಳಗಾದಂತೆ ರಾಮನ ಕಣ್ಣಲ್ಲಿ ಕಣ್ಣಿಟ್ಟು ನೋಡಿದಳು. ರಾಮನು ಕೂಡಲೆ ಮುಖ ಕೆಳಗಾಗಿಸಿಕೊಂಡು ಉಣ್ಣ ತೊಡಗಿದನು. ಅವನ ತುತ್ತಿನಲ್ಲಿ ಕಣ್ಣ ಹನಿಗಳು ಉದುರಿ ಒಂದಾದವು!

ಕಾಣ್ಕೆಯೊ? ಕಲ್ಪನೆಯೋ? ವೃದ್ಧೆ ಮೌನಿಯಾದಳು. ತನಗೆ ಅರಿಯದ ಅರ್ಥವನ್ನು ನಿರ್ಣಯಿಸುವುದು ಹೇಗೆ ಎಂದು ದಿಜ್ಮೂಢಳಾದಳು!

* * *

ಊಟವಾದನಂತರ ರಾಮಲಕ್ಷ್ಮಣರು ಮಧ್ಯಾಹ್ನದ ವಿಶ್ರಾಂತಿಗಾಗಿ ಮಲಗಿದರು. ಬಿಳಿ ಮೈಯ ಲಕ್ಷ್ಮಣನು ಎಚ್ಚೆತ್ತು ಹೊರಗೆ ಹೋದನು. ಆಗ ನೀಲಿ ಮೈಯ ರಾಮಚಂದ್ರನು ಹೀಗೆ ಕನವರಿಸಿದನು:

'ಸೀತೆ ಬಾ ಇಲ್ಲಿ; ಬಾ, ಪ್ರಿಯೆ, ಜನಕಜಾತೆ.'

ಪರ್ಣಕುಟಿಯಲ್ಲಿ ಅಲ್ಲಿಯೇ ಹತ್ತಿರದಲ್ಲಿ ಬೇಲದ ಹಣ್ಣು ಬೆಲ್ಲವನ್ನು ಬೆರೆಸಿ ಪಾನಕ ಮಾಡುತ್ತಿದ್ದ ಶಬರಜ್ಜಿ ಅದನ್ನು ಕೇಳಿ ಓಡಿ ಬಂದಳು. ಹಾಸಿಗೆ ಬಳಿ ನಿಂತು ಕನಸಿನಲ್ಲಿ ಮುಗುಳುನಗುತ್ತಿದ್ದ ಸುಂದರ ದೇಹದವನನ್ನು ನೋಡಿ ಆನಂದ ಪಟ್ಟಳು. ಮಂದಹಾಸದ ಆ ಮುಖ ಕಮಲದಲ್ಲಿ ತನ್ನ ಸೌಮ್ಯ ಮೂರ್ತಿಯನ್ನು ಕಂಡಳು!

ಆದರೇನು, ನೋಡು ನೋಡುತ್ತಿದ್ದಂತೆ ಆಮುಖದ ಸೌಮ್ಯ ಮುದ್ರೆ ಹಿಂಗಿತು. ವೈರಭಾವದಿಂದ ಅದು ವಿಕಾರವಾಯಿತು. ಕೋಪದಿಂದ ಉದ್ರೇಕಗೊಂಡ ಕೂಗು ಹೊಮ್ಮಿ ಬಂತು:

'ನಿಲ್ಲು ನಿಲ್ಲು, ರಾಕ್ಷಸಾಧಮ. ನಿಲ್ಲು! ನೀಚನೇ, ನನ್ನ ಸೀತೆಯನ್ನು ಎಲ್ಲಿಗೊಯ್ಯುತ್ತಿರುವೆ ಹೇಳು!'

ಹುಬ್ಬು ಗಂಟಿಕ್ಕಿ ಔಡುಗಚ್ಚಿದನು. ಕೆಟ್ಟ ಕನಸಿನಿಂದ ಎಚ್ಚೆತ್ತು ಕುಳಿತನು. ಅಜ್ಜಿ ಗಾಬರಿಗೊಂಡು ನಿಂತಿದ್ದನ್ನು ನೋಡಿ ನಾಚಿ, ತಲೆ ಕೆಳಗಾಗಿಸಿದನು. ಕ್ಷಮೆಯಾಚಿಸುವಂತೆ ನುಡಿದನು:

'ಅಜ್ಜಿ ತಪ್ಪು ಮಾಡಿದೆ, ಕಂಡಕನಸನ್ನು ನಿಜವೆಂದು ತಿಳಿದು ಸುಮ್ಮನೆ ನಿನಗೆ ಭಯವನ್ನುಂಟು ಮಾಡಿದೆ'

ಶಬರಜ್ಜಿಗೆ ತನ್ನ ನಿರೀಕ್ಷಣಾ ವ್ರತ ಫಲಿಸಿರುವುದು ಸ್ಪಷ್ಟವಾಯಿತು. ದೊಪ್ಪನೆ ಕುಸಿದು ರಾಮನನ್ನು ತಬ್ಬಿ ಕೊಂಡಳು. ಹೃದಯ ಕರಗಿ ಮಾತು ಮುತ್ತಾಗಿ ಹೊಮ್ಮಿತು.

'ದಮ್ಮಯ್ಯ, ಸಾಕಿನ್ನು. ಮರೆಮಾಡ ಬೇಡಯ್ಯ. ಓ ನನ್ನ ಕಂದಯ್ಯ, ರಾಮಚಂದ್ರಯ್ಯ! ಏನಾಯ್ತು ನನ್ನ ಮಗಳಿಗೆ ಹೇಳು! ಸೀತೆ ಎಲ್ಲಿದ್ದಾಳೆ, ಕೇಡೇನಾಯಿತು? ನನ್ನ ಈ ಹಾಳು ಕಣ್ಣುಗಳು ನಿನ್ನನ್ನು ತಿಳಿಯದೆ ಹೋದವು! ಅಯ್ಯೊ, ನಾನಾಗಲೆ ನಿನ್ನ ಬಿದಿರ ಪೆಟ್ಟಿಗೆಯಲ್ಲಿ ಒಂದು ಸೀರೆಯನ್ನು ನೋಡಿದರೂ ಅರಿಯದೆ ಹೋದೆ! ಈ ಮುಪ್ಪು ಬೆಪ್ಪು'. ತಾಯಿಯ ಅಪ್ಪುಗೆಯ ತೊಟ್ಟಿಲ ಶಿಶುವಾದ ಅವನು ಹೇಳಿದ. 'ಅಜ್ಜಿ, ನಾನೇ ನಿರ್ಭಾಗ್ಯನಾದರಾಮ. ಸೀತೆಯನ್ನು ರಾಕ್ಷಸ ಕದ್ದೊಯ್ದ. ಅವಳನ್ನು ಹುಡುಕುತ್ತ ಲಕ್ಷ್ಮಣನೊಡನೆ ಅಲೆಯುತ್ತಿದ್ದೇನೆ.'

ತಾಳಲಾರದ ಶೋಕಭಾರದಿಂದ ದಾಶರಥಿಯು ಕುಗ್ಗಿ ಹೋದನು. ಏಳಲಾರದೆ ಹಾಸಿಗೆ ಹಿಡಿದನು. ಶಬರಿಯ ಶುಶ್ರೂಷೆಯನ್ನು ಬೇಡುವ ಅತಿಥಿಯಾದನು.

ಮನೋರೋಗಕ್ಕೆ ಪ್ರೇಮವೇ ಶ್ರೇಷ್ಠ ವೈದ್ಯ! ಪ್ರಾಣದ ಗಾಯಕ್ಕೆ ಪ್ರೀತಿಯೆ ಪರಮೌಷಧ. ಅದನ್ನು ಹೊರತು ಪಡಿಸಿದ ಔಷಧ ಬರಿಯ ಭ್ರಾಂತಿ ಎಂಬ ಅರಿವಿನಲ್ಲಿ ತನ್ನ ಇಷ್ಟದೇವತಾಮೂರ್ತಿ ರಾಮನನ್ನು ತಪಸ್ವಿನಿ ಶಬರಿ ಆರೈಕೆ ಮಾಡಿದಳು. ಹಗಲು ಇರುಳು ಎನ್ನದೆ, ಎಚ್ಚರ ನಿದ್ರೆ ಎನ್ನದೆ ನಿರಂತರ ರಾಮಸೇವಾ ಸಾಧನೆಯಲ್ಲಿ ತನ್ನ ಆಯುಷ್ಯವನ್ನು ಸವೆಸಿದಳು! ಅವಳು ಹಾಸಗೆಯ ಬಳಿ ಕುಳಿತು ರಾಮನ ಮೈಸವರುತ್ತ ವನವಾಸದ ಕಥೆಯೆಲ್ಲಾ ಕೇಳುವಳು, ತನ್ನ ಬಾಳಿನ ಕಥೆ ಹೇಳಿ ಸಂತೈಸುವಳು. ಆದರೂ ಅವನ ವಿಚಿತ್ರ ಕಾಯಿಲೆ ವಾಸಿಯಾಗಲಿಲ್ಲ. ರಾವಣನ ರಾಜತಂತ್ರದ ಬಯಕೆ ಯಶಸ್ವಿಯಾಯಿತು ಎನ್ನುವಂತೆ ರಾಮನ ಮನದ ಕೆಚ್ಚು ದಿನೇ ದಿನೇ ಮುರುಟಿ ಹೋಯಿತು. ಮುಖಬಾಡಿತು.

ಒಂದು ಅಮಾವಾಸ್ಯೆಯ ದಿನ ರಾತ್ರಿ ಕತ್ತಲಲ್ಲಿ ಲಕ್ಷ್ಮಣನೊಬ್ಬನೇ ಹೊರಗೆ ಹೋದ. ಬಂಡೆಯ ಮೇಲೆ ಕುಳಿತು ಬಿಕ್ಕಿ ಬಿಕ್ಕಿ ಅಳುತ್ತ ಸಪ್ತರ್ಷಿ ಮಂಡಲವು ಮೇಲೇರುವುದನ್ನು ನೋಡುತ್ತಿದ್ದ. ಹಿಂದಿನಿಂದ ಬಂದ ಶಬರಜ್ಜಿ ಅವನ ಹೆಗಲ ಮೇಲೆ ಕೈಯಿಟ್ಟು ಕೇಳಿದಳು:

'ಕಂದ ಲಕ್ಷ್ಮಣ, ಇದೇಕೆ ನೀನು ಹೀಗೆ ಧೈರ್ಯಗುಂದಿ ಕೊರಗುತ್ತಿರುವೆ?'

'ಅಜ್ಜಿ ಅತ್ತಿಗೆಯ ಪಾಡು ಹಾಗಾಯಿತು. ಅಣ್ಣನಿಗೆ.... ಅಣ್ಣನು' ಎಂದು ಏನೂ ಹೇಳಲಾಗದೆ ಒಂದೇ ಸಮನೆ ದು:ಖಿಸಿದನು. ಅವನನ್ನು ಸಮಾಧಾನ ಪಡಿಸುತ್ತ ಅಜ್ಜಿಯು,

'ಸೌಮಿತ್ರಿ, ಮಗು, ಬಾ ಒಳಗೆ, ದು:ಖ ಬಿಡು. ನಿನ್ನ ಅಣ್ಣನ ಪ್ರಾಣಕ್ಕೆ ನಾನು ಹೊಣೆ. ನನ್ನ ಗುರು ಕೃಪೆಯಿಂದ ರಾಮನ ಕಾಯಿಲೆಯನ್ನೆಲ್ಲ ಹೀರಿ ಬಿಸಾಡುವೆ. ನೋಡು, ಬಾ!, ಎಂದು ಹೇಳಿ ಕರೆದುಕೊಂಡು ಹೋದಳು. ತನ್ನ ಗುರುವನ್ನು

ಧ್ಯಾನಿಸಿದಳು. ಎಲುಬು ಗೂಡಾಗಿದ್ದ ಶ್ರೀ ರಾಮನನ್ನು ಪ್ರದಕ್ಷಿಣೆ ಮಾಡಿದಳು. ಅವನ ಪಾದಗಳನ್ನು ಮುಟ್ಟಿ ನಮಸ್ಕರಿಸಿದಳು. ಬೆರಗುಗಣ್ಣಿನಿಂದ ನೋಡುತ್ತಿದ್ದ ಲಕ್ಷ್ಮಣನಕಡೆ ತಿರುಗಿ ನುಡಿದಳು:

'ವತ್ಸ, ರಾಮನಿನ್ನು ಸುಕ್ಷೇಮಿ. ನಿನ್ನ ದು:ಖವನ್ನು ಬಿಡು'.

ಮರುದಿನ ಬೆಳಗಾಗಲು ಆರೋಗ್ಯ ಲಕ್ಷಣದ ರಾಮನು ಎದ್ದನು. ಲಕ್ಷ್ಮಣನು ಅವನ ಹೊಳೆಯುವ ಕಣ್ಣುಗಳನ್ನು, ಸಂತಸ ಮುಖ ಶೋಭೆಯನ್ನು ಕಂಡನು. ಕೃತಜ್ಞತೆಯಿಂದ ತಪಸ್ವಿ ಶಬರಿಯ ಚರಣಗಳಿಗೆ ವಂದಿಸಿದನು.

ಆ ದಿನವೆ ಶಬರಿಯು ಹಾಸಿಗೆ ಹಿಡಿದಳು. ಬೆಂಡಾದವಳನ್ನು ರಾಮನು ತನ್ನ ದು:ಖ ಮರೆತು ಉಪಚರಿಸಿದನು.

'ಮಗುವೆ, ನನಗಾಗಿ ಮರುಗಬೇಡ. ಹಸುರೆಲೆಗೆ ಉಪಚಾರ ಬೇಕು, ಹಣ್ಣೆಲೆಗೆ ಏಕೆ?' ಎಂದು ಹೇಳಿದ ಮಾತಂಗಿ ಸಂತೋಷ ಪಡುತ್ತ ನುಡಿದಳು: 'ರಾಮಚಂದ್ರ ನಾನು ಧನ್ಯಳಾದೆ. ನೀನುಪ್ರೀತಿಯಿಂದ ಸೇವೆ ಮಾಡುತ್ತಿರಲು ನನಗೆ ಅಧ್ಯಾತ್ಮ ಸಿದ್ಧಿಸುತ್ತದೆ. ಇದಕ್ಕಿಂತ ಪುಣ್ಯ ಬೇರೆ ಏನಿದೆ?'

'ಶಬರಜ್ಜಿ, ನಿನ್ನ ಶಾಂತಿ ಸಮಾಧಾನವೇ ನನ್ನ ಭಾಗ್ಯ.'

'ಧಾಶರಥಿಯೇ, ನೀನು ಮುಂದೆ ಮಾಡಬೇಕಾದ ಕೆಲಸ ಬೆಟ್ಟದಷ್ಟಿದೆ; ಕಷ್ಟವೂ ಆಗಿದೆ. ನಾನು ಕಂಡ ಕನಸನ್ನು ಹೇಳುವೆ ಕೇಳು: ರಾವಣನ ಲಂಕೆಯ ಉದ್ಯಾನದಲ್ಲಿಸೀತೆ ಸೊರಗಿದ್ದಾಳೆ, ಮರುಗುತ್ತಿದ್ದಾಳೆ.

'ನಿನ್ನಂತೆ ಮಡದಿಯನ್ನು ಕಳೆದುಕೊಡು ಕಾಡುಪಾಲಾದ ಸುಗ್ರೀವ ನೊಬ್ಬನಿರುವನೆಂದು, ನಿನಗೆ ಹಿಂದೆ ಹೇಳಿದ್ದೆನಲ್ಲವೆ? ಅದೋ ನೋಡು. ಅಲ್ಲಿ ದಿಗಂತಕ್ಕೆದುರಾಗಿ ಋಷ್ಯಮೂಕ ಪರ್ವತವಿದೆ. ಅದರ ತಪ್ಪಲಲ್ಲಿ ಮತಂಗ ಮುನಿಯ ಕಾನನವಿದೆ. ಅದರ ಅಂಚಿನಲ್ಲಿ ಪಂಪಾ ಸರೋವರವಿದೆ. ಅದರ ಸಮೀಪದ ತುಂಗಭದ್ರಾನದಿಯ ತೀರದಲ್ಲಿ ವಾನರ ರಾಜಧಾನಿ ಕಿಷ್ಕಿಂದೆಯಿದೆ. ವಾಲಿಯು ಅದನ್ನು ಆಳುತ್ತಿದ್ದಾನೆ. ಅವನಿಂದ ಸೋತು, ದೆಸೆಗೆಟ್ಟು ಅವನ ತಮ್ಮ ಸುಗ್ರೀವನು ಗುಹಾವಾಸಿಯಾಗಿದ್ದಾನೆ. ನೀನು ಹೋಗಿ ಅವನ ಸಖ್ಯವನ್ನು ಪಡೆ. ದೈವೇಚ್ಛೆಗೆಲ್ಲಲಿ: ನಿನ್ನಿಚ್ಛೆಯು ಸಫಲವಾಗಲಿ'

ಎಂದು ಹೇಳುತ್ತ ಅತಿ ಹರ್ಷಮುಖಿಯಾಗಿ, ರಾಮಲಕ್ಷ್ಮಣರನ್ನು ನೋಡುತ್ತ ಅಮರ ಸನ್ಮಾನ್ಯೆ ಕಣ್ಣು ಮುಚ್ಚಿದಳು.



3

# ವಾಲಿ

ಋಷ್ಯಮೂಕ ಪರ್ವತದಲ್ಲಿ ಮನೋಹರ ಸೂರ್ಯೋದಯವನ್ನು ನೋಡಿ ರಾಮಲಕ್ಷ್ಮಣರು ಆನಂದಿಸುತ್ತಿದ್ದರು. ಅವರ ಒಳಮನ ಸುಗ್ರೀವನನ್ನು ಎದುರು ನೋಡುತ್ತ ಕ್ಷಣಗಣನೆ ಮಾಡುತ್ತಿತ್ತು. ಬೆಳಗಿನ ಸೂರ್ಯ ಕಿರಣಗಳು ಮರದ ಹಸಿರಿನ ಕಂಡಿಕಂಡಿಗಳಿಂದ ಇಣುಕಿದಂತೆ ರಾಮನ ಮನದಲ್ಲಿ ಹಿಂದಿನ ದಿನದ ಮಂತ್ರಾಲೋಚನೆಯ ನುಡಿಗಳು ಇಣುಕಿದವು.

ವಾಲಿ ದುಂದುಭಿಯೆಂಬ ರಾಕ್ಷಸನನ್ನು ಕೊಂದಿದ್ದನು. ಆ ರಾಕ್ಷಸನ ಮಗ ಮಾಯಾವಿಯು ವಾಲಿಯನ್ನು ಯುದ್ಧಕ್ಕೆ ಒಂದು ಗವಿಯೊಳಕ್ಕೆ ಒಯ್ದನು, ವಾಲಿ ಗುಹೆ ಹೊಕ್ಕಾಗ ಸುಗ್ರೀವನಿಗೆ ಹೊರಗಡೆ ಕಾದಿರಲು ಹೇಳಿದನು. ಸುಗ್ರೀವ ಹತ್ತು ವರ್ಷ ಕಾದನು. ಗುಹೆಯಿಂದ ನೊರೆನೊರೆ ನೆತ್ತರು ಬಂದು, ಆರ್ಭಟ ಕೇಳಲು ತನ್ನ ಅಣ್ಣ ಸತ್ತಿರಬಹುದೆಂದು ಗುಹೆಗೆ ಹೆಬ್ಬಂಡೆ ತುರುಕಿ ಕಿಷ್ಕಂಧೆಗೆ ಹಿಂದಿರುಗಿದನು.

ಮಾಯಾವಿಯನ್ನು ಕೊಂದ ವಾಲಿ ಹೊರಬರಲು ಪ್ರಯತ್ನಿಸಿದನು. ಗುಹೆಗೆ ಅಡ್ಡ ಬಂಡೆ ತುರಕಿದ್ದು ಕಂಡು ಅದನ್ನು ತಳ್ಳಿ ಹೊರಬಂದನು. ತಮ್ಮ ತನಗೆ ದ್ರೋಹ ಬಗೆದ ಎಂದು ತಿಳಿದನು. ಕಿಷ್ಕಂಧೆಗೆ ಹಿಂದಿರುಗಿ ಜನರಿಗೆ ತನ್ನ ಕರುಣಾ ಕಥೆ ಹೇಳಿದನು. ಕ್ರೋಧದಿಂದ ಕುರುಡಾಗಿ ತಮ್ಮನನ್ನು ಸೋದರ ದ್ರೋಹಿ, ರಾಜದ್ರೋಹಿ ಎಂದು ಕರೆದನು. ತಮ್ಮನ ಮಾತನ್ನು ಕೇಳದೆ, ಅವನನ್ನು, ಅವನ

ಮಿತ್ರರನ್ನು ದೇಶದಿಂದಾಚೆ ಓಡಿಸಿದನು. ಸುಗ್ರಿವನ ಹೆಂಡತಿ ರುಮೆಯನ್ನು ಗಂಡನೊಡನೆ ಹೋಗಲು ಬಿಡದೆ ಸೆರೆಯಲ್ಲಿಟ್ಟನು.

ಮತಂಗ ಮಹರ್ಷಿಯ ಶಾಪದ ಕಾರಣದಿಂದ ವಾಲಿ ಋಷ್ಯಮೂಕವನ್ನು ಪ್ರವೇಶಿಸುತ್ತಿರಲಿಲ್ಲ. ಆದುದರಿಂದ ಸುಗ್ರೀವ ಮತ್ತು ಅವನ ಸ್ನೇಹಿತರು ಅಲ್ಲಿ ಸುರಕ್ಷಿತವಾಗಿದ್ದರು. ಈ ಘಟನಾವಳಿಗಳನ್ನು ಹೇಳಿ ಸುಗ್ರೀವನು ತಮ್ಮಿಬ್ಬರಲ್ಲಿ ಸಮಾನತೆ ಇದೆ ಎಂದು ತಿಳಿಸಿದ್ದನು.

ನೆನಪಿನ ಬೆಳಕಿಂಡಿಯಿಂದ ತೂರಿದ ಜೀವನ ವಿಚಿತ್ರ ಜೋಡಣೆಯ ಕಣ್ಣು ಕಣ್ಣಿನ ರಂಗೋಲಿ ಸೃಷ್ಟಿಸಿದ ವಿಲಾಸ ಕಂಡು ಅವನಲ್ಲಿ ನಗೆ ಹೊಮ್ಮಿತು.

ವಾಲಿಯು ಬ್ರಹ್ಮನಿಂದ ಎದುರಿಗೆ ನಿಂತ ವೈರಿಯ ಬಲದಲ್ಲಿ ಅರ್ಧ ಅವನಿಗೆ ಸೇರುವಂತೆ ವರವನ್ನು ಪಡೆದಿದ್ದಾನೆ. ಇಂದ್ರನ ಮಗನಾದ ಅವನು ಇಂದ್ರನಿಂದ ವಜ್ರಕವಚ ರಕ್ಷಣೆ ಹೊಂದಿದ್ದಾನೆ. ಅವನಿಗೆ ಹತ್ತು ಜನ ದಶಕಂಠರು ಹುಲ್ಲು ಕಡ್ಡಿಗೆ ಸಮ. ಅವನು ಮೃತ್ಯುವಿಗೆ ಸಮನಾದ ವೀರ, ಹಲವಾರು ಸಲ ಅವನಿಂದ ಸೋತು ಮೈ ಮುರಿಸಿಕೊಂಡಿದ್ದೇನೆ. ಹುಸಿಯಾದ ಶಕ್ತಿನಂಬಿ ಹೋರಾಡಲಾರೆ ಎಂದು ಸುಗ್ರೀವ ತನ್ನ ಮಿತಿಯಾದ ಬಲಸಾಮಾರ್ಥ್ಯ ತಿಳಿಸಿದನು. ಅವನ ಸಲಹೆಯಂತೆ ವಾಲಿಯನ್ನು ನೇರವಾಗಿ ಎದುರಿಸದೆ ಸಂಹರಿಸಲು ರಾಮ ತೀರ್ಮಾನಿಸಿದನು.

ರಾವಣನು ಸೀತೆಯನ್ನು ಕದ್ದೊಯ್ದಿರುವನು ಎಂಬುದು ನಮ್ಮ ಊಹೆ ಎಂದು ಸುಗ್ರೀವ ಹೇಳಿದನು. ನಮಗೆ ಅಡ್ಡಿಯಾಗಿರುವುದು ವಾಲಿ. ಅವನನ್ನು ನಿವಾರಿಸಬೇಕೆಂದು ರಾಮನನ್ನು ಕೇಳಿಕೊಂಡನು. ಇಂದು ಕಿಷ್ಕಿಂಧೆಗೆ ಮುತ್ತಿಗೆ ಹಾಕಲು ನಿರ್ಧರಿಸಿದನು.

ಈ ಬಗೆಯ ವ್ಯೂಹದಲ್ಲಿ ನಾವು ಅವರಿಗಾಗಿ ಕಾಯುತ್ತ ಕುಳಿತೆವಲ್ಲ, ಕಾಯುವುದು ಒಂದು ಶಿಕ್ಷೆ ಎಂದು ರಾಮನು ಕತ್ತೆತ್ತಿ ನೋಡಲು ಸುಗ್ರೀವ ತನ್ನವರೊಡನೆ ಬರುತ್ತಿರುವುದು ಕಂಡಿತು.

* * *

ಅದ್ಭುತ ರಣಕಹಳೆ ಕೇಳಿಸಿತು. ಅದಕ್ಕೆ ಬೆಳಗಿನ ಗಾಳಿ ತಲ್ಲಣಿಸಿ ಕಂಪಿಸಿತು. ವನಚರರಾದ ವಾನರರು ಶೂರ ನರರು. ಅವರ ಮುಂದೆ ಕಪಿಧ್ವಜ ರಾರಾಜಿಸುತ್ತಿತ್ತು. ಸುಗ್ರೀವನು ಆಂಜನೇಯಾದಿಗಳ ಸಮೇತ ಬಂದನು. ಅವನು ವಾನರ ಕುಲದ ಪದ್ಧತಿಯಂತೆ ಕೆಂಪು ಹೂ, ಕೆಂಬಕ್ಕಿ ಗೆರೆ, ಕೆಂಪು ಅರಿವೆ ತೊಟ್ಟು ಭಯಂಕರವಾಗಿದ್ದನು. ಅವನನ್ನು ಕಂಡು ರಾಮಲಕ್ಷ್ಮಣರಲ್ಲಿದ್ದ ಶಂಕೆ ತಲೆ ತಗ್ಗಿಸಿತು. ಆಸೆ ಮರುಕಳಿಸಿತು. ನೆಚ್ಚು ಕೆಚ್ಚು ಉಂಟಾಯಿತು. ಎಲ್ಲರೂ ಕಿಷ್ಕಿಂಧೆಯ ಕಡೆ ನಡೆದರು.

ವಾಲಿಯು ಆಳುತ್ತಿದ್ದ ದುರ್ಗ ನಗರದ ಸುತ್ತಲೂ ಹಬ್ಬಿದ್ದ ವನ ಪ್ರದೇಶವನ್ನು ಹೊಕ್ಕರು. ರಾಮಾದಿಗಳು ಮರಸು ಕೂತವರಂತೆ ಕಾಡಿನ ಮರೆಯಲ್ಲಿ ಮೌನವಾಗಿ ಮತ್ತು ಎಚ್ಚರದಿಂದ ಅಡಗಿ ಕಾದು ಕುಳಿತರು. ಸುಗ್ರೀವನೊಬ್ಬನೇ ಮುಂದೆ ನಡೆದು

ಎತ್ತರವಾದ ಬಂಡೆಯನ್ನು ಏರಿ ನಿಂತನು. ಕಾಡೆಲ್ಲವನ್ನು ದಿಟ್ಟಿಸಿ ನೋಡಿದನು. ತನ್ನ ಪ್ರೀತಿಯ ಬೀಡನ್ನು ಕಣ್ಣಾಲಿಗಳಿಂದಲೇ ಆಲಂಗಿಸುವಂತೆ ದೃಷ್ಟಿ ಬೀರಿದನು! ಆ ವನ ಪ್ರೇಮಿಯು ವಿರಹ ರೋಷದಿಂದ ಔಡುಗಚ್ಚಿ, ನಿಂತಿದ್ದ ಹೋರಿಗೆ ಮತ್ತೊಂದು ಹೋರಿ ಮಲೆತು ಮೂದಲಿಸಿ ಗುಟುರು ಹಾಕಿ ಕಾಳಗಕ್ಕೆ ಕರೆಯುವಂತೆ ಗರ್ಜಿಸಿದನು. ಅದಕ್ಕೆ ಬಂಡೆಗಳು ನಡುಗಿದವು. ಮಲೆಯು ಪ್ರತಿಧ್ವನಿಸಿತು. ಮರಗಳು ತೊನೆದಾಡಿದವು. ಹಕ್ಕಿಗಳು ಚೀರಿದವು. ಜಿಂಕೆ, ಕಾಡ್ಕೋಣ, ಹಂದಿ, ಹೆಬ್ಬುಲಿ, ಸಿಂಹ, ಆನೆಗಳು ಬೆದರಿದವು. ಗರ್ಜನೆಯ ಸಿಡಿಲು ಕ್ರಮೇಣ ಶಾಂತವಾಗಲು ಕಾಡಿನ ಮೌನದ ಕಡಲು ಹೆಪ್ಪುಗಟ್ಟಿತು.

ನೋಡುವವರು ಅಲಗಿನ ಮೇಲೆ ಕುಳಿತಂತೆ ಉದ್ವೇಗಕ್ಕೊಳಗಾದರು. ಮರಗಳಲ್ಲಿ ಗಾಳಿ ಸುಳಿಯದ ಸದ್ದು; ತರಗೆಲೆಗಳು ಉದುರಿ ಬೀಳುವ ಸದ್ದು; ಹೂ ಹಕ್ಕಿಗಳು ಜೇನು ಸವಿದು ಹಾಡುವ ಸದ್ದು; ಸಸ್ಯಗಳ ಉಸಿರಿನ ಸದ್ದು; ನಿದ್ರಿಸುವ ಕಲ್ಲುಗಳಿಂದಾಗಿ ಅರಣ್ಯದ ನೀರವತೆ ಮುಷ್ಟಿಯಿಂದ ಹಿಡಿಯುವಂತಾಯಿತು!

ಅಲ್ಲಿದ್ದವರೆಲ್ಲ ನೋಡುತ್ತ ಹೀಗೆ ಆಲಿಸುತ್ತಿರಲು ಬೆಟ್ಟ ಬಂಡೆಗಳು ಅದುರುವಂತೆ, ಮರದ ಕೊಂಬೆಗಳು ಉದುರುವಂತೆ ಚಂಡೆ ಮದ್ದಲೆಯ ಸದ್ದು ಸಿಡಿಲಂತೆ ಕಿವಿಗಳನ್ನು ಇರಿದವು. ಅದನ್ನು ಮೀರಿ ವಾಲಿಯ ಗರ್ಜನೆಯ ಆರ್ಭಟ ಕೇಳಿಸಿತು. ರಾಮನ ಎದೆ ದಿಗಿಲ್ ಎಂದಿತು. ಲಕ್ಷ್ಮಣ, ಹನುಮ, ನೀಲ, ಜಾಂಬವ ಮುಂತಾದವರು ಉಡುಗಿ ಹೋದರು. ಬೆಟ್ಟ ಗುಡುಗಿ, ಕಾಡು ನಡುಗಿದಂತಾಯಿತು. ಹೆಬ್ಬಲಸಿನ ಬಳಿ ಕಾಕು ಕೇಳಿಸಿತು. ಮತ್ತೆ ಚಂಡೆದನಿ! ವಾಲಿಯ ವೀರಾಟ್ಟಹಾಸ! ಅದಕ್ಕೆ ಪ್ರತಿಯಾಗಿ ಸುಗ್ರೀವನ ಗರ್ಜನೆ!

ರಣಾವೇಶಿ ವಾಲಿಯು, ರಣವೇಷಿ ಸುಗ್ರೀವನನ್ನು ನೋಡಿದನು. ಕಣ್ಣು ಕೆಂಪಾದವು. ಮುಖದಲ್ಲಿ ರೌದ್ರತೆ ಕುಣಿದಾಡಿತು. ಕೊಂಕುದುಟಿಯ ಮೇಲೆ ಮೀಸೆ ಕುಣಿದವು. ಮತ್ತೊಮ್ಮೆ ಮಲೆ ನಡುಗುವಂತೆ ಅಬ್ಬರಿಸಿ ಸುಗ್ರೀವನೆಡೆಗೆ ಚಿಮ್ಮಿದನು! ತನು ಕಾಂತಿಯಿಂದ, ವಸ್ತ್ರ, ವರ್ಣ, ಅಲಂಕಾರಾದಿಗಳಿಂದ ಅವರಿಬ್ಬರೂ ಒಂದೇ ರೀತಿಯಾಗಿ ಕಾಣುತ್ತಿದ್ದರು. ವಾಲಿಯಾರು ಸುಗ್ರೀವನಾರು ಎಂದು ಗುರುತಿಸಲಾಗದೆ ರಾಮನು ಹಲ್ಲು ಕಚ್ಚಿದನು! ವಾಲಿಯನ್ನು ಸಂಹರಿಸುವೆನೆಂಬ ಭೀಷ್ಮ ಪ್ರತಿಜ್ಞೆ ನೆನೆದು ನಾಚಿ ಬೆಪ್ಪನಂತೆ ಹುಬ್ಬುಗಂಟಿಕ್ಕಿ ನೋಡುತ್ತಿದ್ದನು! ಅವನ ನೋಟ ಎರಡು ಹೋರಿಗಳು ಹೋರಾಡುತ್ತಿದ್ದರೆ ಹೊಂಚು ಹಾಕಿ ದಿಟ್ಟಿಸುವ ಹುಲಿಯಂತಿತ್ತು!.

ಬಲಶಾಲಿಯಾದ ವಾಲಿ ನುಗ್ಗಿ ಬರುವುದನ್ನು ನೋಡಿ ಸುಗ್ರೀವ ಪಕ್ಕಕ್ಕೆ ಸರಿದು ಅವನ ನೆತ್ತಿಯನ್ನು ಗುದ್ದಿದನು. ಕಲ್ಲು ಪುಡಿಮಾಡುವಂತಹ ಆ ಆಘಾತಕ್ಕೆ ಇಂದ್ರಕುಮಾರ ವಾಲಿ ತತ್ತರಿಸಿ ಹೋದನು. ಮತ್ತೆ ಚೇತರಿಸಿಕೊಂಡು ಸಿಡಿ ರೋಷದಿಂದ ಅರೆಬಂಡೆಯನ್ನು ತಮ್ಮನ ಕಡೆ ಗುಂಡಿಡುವಂತೆ ಬೀಸಿದನು. ಸುಗ್ರೀವ ಸತ್ತುಹೋದ ಎನ್ನುವಷ್ಟರಲ್ಲಿ ಅವನು ಪಕ್ಕಕ್ಕೆ ಹಾರಿದನು. ಗುರಿ ತಪ್ಪಿದ ಬಂಡೆ ಒಂದು ಮರದ ಬುಡಕ್ಕೆ ಅಪ್ಪಳಿಸಲು ಅದು ಮುರಿದುಬಿತ್ತು. ಅದನ್ನೇ ಗದೆಯಾಗಿ

ಮಾಡಿಕೊಂಡ ರವಿಪುತ್ರ ಸುಗ್ರೀವನು ವಾಲಿಗೆ ಅಪ್ಪಳಿಸಿದ. ಅದನ್ನು ಕಪಿಮುಷ್ಟಿಯಿಂದ ಹಿಡಿದ ವಾಲಿ,

'ಎಲವೋ ಸುಗ್ರೀವನೇ ಕೇಳು. ತಮ್ಮನೆಂಬ ಪ್ರೀತಿಗಾಗಿ, ನಿನ್ನ ಪತಿವ್ರತ ಸತಿಯ ಮುತ್ತೈದೆತನಕ್ಕಾಗಿ, ತಾರೆಯು ನೀಡಿದ ಹಿತವಚನದಿಂದ ಹುಸಿಯುದ್ಧ ಮಾಡುತ್ತಿದ್ದೆ. ಆದರೆ ನೀನು ಮಲೆತು ಕೊಬ್ಬಿರುವೆ. ನನ್ನಲ್ಲಿ ಹಗೆತನವು ಬಾಡಿ ಗೆಳೆತನವು ಚಿಗುರುವಾಗಲೇ ಯಾರೋ ಉತ್ತರದ ರಾಜನನ್ನು ಕೂಡಿಕೊಂಡು ನನ್ನನ್ನು ಕೆಣಕುತ್ತಿರುವೆ. ಅಯ್ಯೋ ಹುಚ್ಚ! ಸಾಹಸದಲ್ಲಿ ವಾಲಿಯನ್ನು ಗೆದ್ದವರು ಉಂಟೆ? ರಾವಣನೇ ಹೆದರಿ ನನ್ನ ಮೈತ್ರಿಯನ್ನಾಶ್ರಯಿಸಿ ಬದುಕುತ್ತಿದ್ದಾನೆ. ಅಂದಮೇಲೆ ನಿನ್ನನ್ನು ನನ್ನ ಕೋಪ ಪ್ರಳಯದ ಸರ್ಪದ ವಿಷದಿಂದ ಕಾಯುವವರಾರು?'

ಎಂದು ಹೇಳಿ ಆ ಮರವನ್ನು ಕಿತ್ತೆಸೆದನು. ಅವನ ಮೇಲೆ ಎರಗಿ ತನ್ನ ಆದಿಶೇಷನಂತಹ ಬಾಹುಗಳಿಂದ ಅವನ ಮಂದರ ಪರ್ವತ ಮೈಯನ್ನು ಬಿಗಿದು ಸುತ್ತಿದನು. ಅವರು ನೆಲಕ್ಕೆ ಉರುಳಿ ಪೊದೆಯ ಮರೆಯಲ್ಲಿ ಹೋರಾಡುತ್ತಿರಲು ರಾಮನಿಗೆ ದಿಡ್ಡುದಿಡ್ಡುಗಳೆಂಬ ಕೈಗುದ್ದುಗಳ ಸದ್ದು, ಆರ್ತನಾದ ಕೇಳಿಸಿದವು. ವಾಲಿ ರಾಮನ ಮಿತ್ರ ಸುಗ್ರೀವನನ್ನು ಬೆನ್ನಟ್ಟಿದ್ದು ಕಾಣಿಸಿತು ಎನ್ನುವಷ್ಟರಲ್ಲಿ ಅವರಿಬ್ಬರೂ ಕಾಡಿನಲ್ಲಿ ಮರೆಯಾದರು.

ರಾಮನ ನೆರವು ಸುಗ್ರೀವನಿಗೆ ಬಿಸಿಲುಗುದುರೆಯಾಯಿತು; ನೆಚ್ಚುಗೆಟ್ಟನು; ಧೈರ್ಯಗುಂದಿದನು. ವಾಲಿಯ ವಜ್ರಾಘಾತಕ್ಕೆ ಮೈ ಮುರಿಯಲು ರಕ್ತಕಾರುತ್ತ ರಕ್ಷಣೆಗಾಗಿ ಮತಂಗ ಮುನಿಯ ಕಾಡನ್ನು ಹೊಕ್ಕನು. ಋಷಿಯ ಶಾಪವನ್ನು ನೆನೆದು ವಾಲಿಯು 'ಬದುಕಿಕೋ ಹೋಗು' ಎಂದು ಹೇಳಿ ಕಿಷ್ಕಿಂಧೆಗೆ ಹಿಂದಿರುಗಿದನು.

* * *

ಶತ್ರುವಿನಿಂದ ಜರ್ಝರಿತನಾಗಿ, ಅವಮಾನಿತನಾಗಿ ನಾಚಿದ ಸುಗ್ರೀವನನ್ನು ರಾಮಾದಿಗಳು ನೋಡಿದರು. ರಾಮನು ತುಂಬಾ ಮರುಗಿದನು. ಆಗ ಸುಗ್ರೀವನು ಅವನಿಗೆ ಹೇಳಿದನು:

'ಓ ಕರುಣಿ, ನೀನು ಏಕೆ ಈರೀತಿ ನಂಬಿಸಿ ನನ್ನನ್ನು ಕೊಂದೆ? ನೀನು ವಾಲಿಗೆ ಗುಪ್ತಚರನೆ? ನನ್ನನ್ನು ಕೊಲ್ಲಿಸಲು ನಿನ್ನ ಹುಸಿ ಆರ್ಯನೀತಿಯನ್ನು ಮೆರೆದೆಯಲ್ಲವೆ? ವಾಲಿಯು ದುಸ್ಸಾಧ್ಯನೆಂದು ನಾನು ಮೊದಲೆ ತಿಳಿಸಿದ್ದೆನಲ್ಲವೆ?'

'ಕ್ಷಮಿಸು ವಾನರೇಂದ್ರ, ನನ್ನನ್ನು ಕ್ಷಮಿಸು. ನಿಮ್ಮಿಬ್ಬರ ರೂಪವು ಒಂದೇ ಆಗಿರುವುದರಿಂದ ಮೋಸ ಹೋದೆನು. ಮತ್ತೆ ಮೋಸ ಹೋಗುವುದಿಲ್ಲ. ಏಳು ಮತ್ತೆ ನಡೆ ಕಿಷ್ಕಿಂಧೆಯ ಕಡೆಗೆ. ವಾಲಿಯನ್ನು ಕೋಟೆಯಿಂದ ಹೊರಡಿಸು, ನಿನ್ನ ಗೃಹ ವೈರಿಯನ್ನು ನನ್ನ ಬಾಣಕ್ಕೆ ಗುರಿಯಾಗಿಸುತ್ತೇನೆ, ಈ ಹೂವಿನ ಬಳ್ಳಿಯನ್ನು ಕುತ್ತಿಗೆಯಲ್ಲಿ ಗುರುತಿಗಾಗಿ ಧರಿಸು. ಇದನ್ನು ವಿಜಯಮಾಲೆ ಎಂದು ತಿಳಿ.'

ಎಂದು ರಾಮನು ಹೂವಿನ ಕಾಡುಬಳ್ಳಿಯನ್ನು ಅವನ ಕೊರಳಿಗೆ ಹಾಕಿದನು. ಅದು ಹಾಲುಗರಿಯ ಬೆಳಕ್ಕಿ ಸಾಲು ಸಂಜೆ ಮುಗಿಲಿಗೆ ಮಾಲೆಗಟ್ಟಿದಂತೆ ಅವನ ಕೊರಳನ್ನು ಅಲಂಕರಿಸಿತು. ಅವರು ಏರಿದ ಉತ್ಸಾಹದಲ್ಲಿ ಮತ್ತೊಮ್ಮೆ ಕಿಷ್ಕಿಂಧೆಯ ಕಡೆಗೆ ನಡೆದರು.

* * *

ವಾಲಿ ತಮ್ಮನನ್ನು ಗೆದ್ದ ಮದದಲ್ಲಿ ಕಿಷ್ಕಿಂಧೆ ಸೇರಿದನು, ಪತ್ನಿ ತಾರೆಯು ಗಾಯಗಳಿಗೆ ಮದ್ದಿಟ್ಟಳು. ಬೀಸಣಿಕೆಯಿಂದ ಬೀಸಿದಳು. ತನ್ನ ಅಮೃತ ಕೈಸೋಕಿನಿಂದ ಬಳಲಿಕೆಯನ್ನು ಪರಿಹರಿಸುತ್ತ ಕದನದ ಆಗುಹೋಗುಗಳನ್ನು ಕೇಳಿದಳು. ಗೆದ್ದು ಬಂದಿದ್ದರು ಖಿನ್ನಮುಖನಾಗಿ ಪತಿವ್ರತೆಯಾದ ಪತ್ನಿಗೆ ಹೀಗೆ ಹೇಳಿದನು:

'ನೀನು ಹೇಳಿದಂತೆ, ರುಮೆಯ ಮುತ್ತೈದೆತನಕ್ಕೆ ಭಂಗ ಬಾರದಂತೆ ಅವನನ್ನು ಬಡಿದಟ್ಟಿ ಬಂದೆ... ಆದರೂ ಮನಸ್ಸೇಕೋ ಪರಿತಪಿಸುತ್ತಿದೆ. ನನ್ನನ್ನು ಗುಹೆಯಲ್ಲಿ ಮುಚ್ಚಿಬಂದ ಎಂಬ ಆಕ್ರೋಶದಿಂದ ಅವನ ವಿನಯದ ನುಡಿಗೆ ಕಿವಿಗೊಡಲಿಲ್ಲ. ಅವನನ್ನು ಗೆಳೆಯರ ಸಮೇತ ಹುಟ್ಟಿದೂರಿನಿಂದ ನೂಕಿದೆ. ರುಮಾದೇವಿಯನ್ನು ಸೆರೆಯಲ್ಲಿಟ್ಟು ಬೇಯಿಸಿದೆ...'

'ತುಂಬಾ ದುಗುಡಕ್ಕೆ ಒಳಗಾಗ ಬೇಡಿ. ಈಗ ಒಳಿತಿನ ಕಡೆಗೆ ಮುಖ ಮಾಡಿರುವಿರಿ. ಸಮಾಧಾನದ ಚಿತ್ತ ನಿಮ್ಮದಾಗಿಸಿಕೊಳ್ಳಿ.'

'ಓ ತಾರೆ, ನಿನ್ನ ಹಿತವಚನ ಕೇಳದೆ ನನ್ನ ಹೆಸರಿಗೆ ನಿಂದೆ ತಂದುಕೊಂಡೆ. ಒಮ್ಮೊಮ್ಮೆ ನನ್ನ ಅನ್ಯಾಯವನ್ನು ತಿದ್ದುಕೊಂಡು ತಮ್ಮನನ್ನು ತಾಯ್ನೆಲಕ್ಕೆ ಕರೆತರ ಬೇಕೆಂದು ಕೊಂಡೆ. ಆದರೆ ಹುಸಿ ಶೌರ್ಯ, ಒಣನಾಚಿಕೆಯಿಂದ ಸುಮ್ಮನಾದೆ. ಅವನೂ ಸಹ ಮರುಕ ಕರುಣೆ ಮೂಡಿಸುವ ಮಾರ್ಗವನ್ನು ಬಿಟ್ಟು ಮುಯ್ಯಿಗೆ ಮುಯ್ಯನ್ನೆ ಬಳಸಿ ನನ್ನ ಕೋಪವನ್ನು ಕೆಣಕಿದ. ಈಗಲೂ ಸಹ ಯಾವನೋ ರಾಮನೆಂಬುವನ ಸಹಾಯವನ್ನು ಪಡೆದು.... ನಾನು ಗುದ್ದುವಾಗ ಅವನನ್ನು ಕರೆದ. ಅದರೆ ಆ ವೀರನೆಲ್ಲೂ ಕಾಣಿಸಲಿಲ್ಲ...!'

ಮಾತು ಮುಗಿಯುವಷ್ಟರಲ್ಲಿ ಕಿಷ್ಕಿಂಧೆ ನಡುಗುವಹಾಗೆ ಒಂದು ಅಬ್ಬರ ಕೇಳಿಸಿತು. 'ಅದೋ ಮತ್ತೆ ಸುಗ್ರೀವ!' ಎಂದು ಔಡುಗಚ್ಚಿದನು. ಆನೆಯ ಘೀಂಕಾರವನ್ನು ಆಲಿಸುವ, ನಿದ್ರೆಯಿಂದ ಎಚ್ಚೆತ್ತ ಸಿಂಹದಂತೆ ಹುಬ್ಬುಗಂಟಿಕ್ಕಿ ನೆಗೆದನು. ತಡೆಯಲು ಬಂದ ತಾರೆಯ ಕೈಯನ್ನು ಪಕ್ಕಕ್ಕೆ ತಳ್ಳಿದನು. ಅವಳು ನೆಲಕ್ಕುರುಳಿ, ಗಂಡನ ಕಾಲು ಹಿಡಿದಳು. ಕಂಬನಿಯ ಜೇನಿಳಿದ ತಾವರೆಗಣ್ಣ ಚೆಲುವೆ,

'ಬೇಡ ಪ್ರಿಯ. ಛಲಕ್ಕಾಗಿ ಜೀವನದ ಶ್ರೇಯಸ್ಸನ್ನೇ ಬಲಿ ಕೊಡಬೇಡ. ನೀನು ಇದುವರೆಗೆ ನನ್ನೊಡನೆ ಹೇಳುತ್ತಿದ್ದ ವೀರರ ಔದಾರ್ಯವನ್ನೇ ಹಿಡಿ. ಪತಿವ್ರತಾಮಣಿಯಾದ ಆ ರುಮಾದೇವಿಯನ್ನು ನೆನೆ. ಜೊತೆಗೆ ನಿಮ್ಮೀರ್ವರ ಎಳೆತನದ ಲೀಲೆಯನ್ನು ತಾರುಣ್ಯದ ಒಲವಿನ ಉಯ್ಯಾಲೆಯನ್ನು ನೆನೆ. ನಿಮ್ಮಲ್ಲಿದ್ದ ಪ್ರೀತಿಯ ಸಗ್ಗ ಸುಖವನ್ನು ನೆನೆ....'

ಎಂದು ನಲ್ಮೆಯಿಂದ ಉಸುರಿದಳು. ಆ ನುಡಿಗಳಿಗೆ ವಾಲಿ ಮುಗ್ಧನಾದನು. ಅವನ ಮನಸ್ಸಿಗೆ ಶಾಂತಿಯೊದಗಿತು. ಅಣ್ಣಾ ಬಾ ಎಂದು ಜೊಲ್ಲು ತೊದಲನುಡಿಯಲ್ಲಿ ಚೀರುತ್ತಿದ್ದ ಸಣ್ಣ ಸುಗ್ರೀವನನ್ನು ಮುದ್ದಾಗಿಎತ್ತಿ ಕೊಂಡದ್ದು ಬೆನ್ನ ಮೇಲೆ ಕೂಸುಮರಿಯಾಗಿಸಿ ಕೊಂಡದ್ದು, 'ಉಪ್ಪು?' ಎಂದು ಅಮ್ಮನ ಮುಂದೆ ಎಲ್ಲರ ಮುಂದೆ ಓಡಾಡಿ ಆಡಿಸಿ ನಗಿಸಿದ ಮೃತಿ ಚಿತ್ರ ಕಣ್ಮುಂದೆ ಸುಳಿಯಿತು. ರೋಷ ಮುಕ್ತನಾದ ಅವನು ಶಾಂತನಾದ. ಅವನ ಮನಸ್ಸಿನಲ್ಲಿ ಮೈತ್ರಿ ಸಂಚರಿಸಿತು.

'ತಾರೆ ಈ ದಿನ ಸುಗ್ರೀವನನ್ನು ತಂದು ರುಮೆಗೆ ಸಂತೋಷವನ್ನು ಉಂಟು ಮಾಡುತ್ತೇನೆ. ಹೋಗು, ನಿನ್ನ ತಂಗಿಯನ್ನು ಅಲಂಕರಿಸು, ನಾವು ಚಿಕ್ಕಂದಿನಲ್ಲಿ ಆಡಿದ ಉಪ್ಪಾಟವನ್ನು ತಮ್ಮನಿಗೆ ತೋರಿಸುತ್ತೇನೆ. ಕಾಳಗದ ನೆವದಿಂದ ರವಿಪುತ್ರ ಸುಗ್ರೀವನನ್ನು ಹೊತ್ತು ತರುತ್ತೇನೆ.'

ಬೃಹದ್ಬಲಶಾಲಿ ವಾಲಿಯು ಸಂತೋಷದಿಂದ ಅಲ್ಲಿ ನಿಲ್ಲದೆ ನಡುಹಗಲು ಕಳೆದಿರಲು ಕೋಟೆಯ ಹೆಬ್ಬಾಗಿಲು ದಾಟಿ ಅಡವಿಗೆ ನಡೆದನು. ಕಾಡು ಪುಷ್ಪಗಳನ್ನು ಕೊರಳಹಾರವಾಗಿ ಧರಿಸಿದ ಸುಗ್ರೀವನನ್ನು ನೋಡಿದನು. ಅವನ ಮನದಲ್ಲಿ ವೈರವು ವೈರಾಗ್ಯಕ್ಕೆ ತಿರುಗಿ ಕರುಣೆಯುಕ್ಕುತ್ತಿತ್ತು. ಆ ಮಧುರ ಭಾವದಲ್ಲಿ ತಮ್ಮನನ್ನು ಅಪ್ಪಿಕೊಳ್ಳಲು ಮುನ್ನುಗ್ಗಿದನು. ಅಣ್ಣನ ಹೃದಯ ಪರಿವರ್ತನೆ ಅರಿಯದ ಸುಗ್ರೀವನು ಕಲ್ಲುಬಂಡೆಗಳನ್ನು ಅವನ ಮೇಲೆ ಬೀಸಿದನು. ವಾಲಿಯು ಅದನ್ನು ಚೆಂಡುಗಳಂತೆ ಕೈಯದಾಂಡುಗಳಿಂದ ಪಕ್ಕಕ್ಕೆ ಸರಿಸಿದನು. ಮಿಂಚು ವೇಗದಿಂದ ಹತ್ತಿರ ಹೋದನು. ಭೇರುಂಡವು ಹುಲಿಯನ್ನು ಎತ್ತುವಂತೆ ತನ್ನ ಕಪಿಮುಷ್ಟಿಯಿಂದ ತಮ್ಮನನ್ನು ಹಿಡಿದು ಎತ್ತಿಕೊಂಡನು. ಕಿಷ್ಕಿಂಧೆಯ ಕಡೆಧಾವಿಸಿದನು.

ರಾಮನು ತನ್ನ ಸನ್ಮಿತ್ರನನ್ನು ವಾಲಿ ಹೊತ್ತುಕೊಂಡು ಓಡುವುದನ್ನು ನೋಡಿ 'ಹಾ ಕೈ ಮೀರಿತು.' ಎಂದು ಮುಂಗೆಟ್ಟನು. ಬೇರೆದಾರಿ ಕಾಣದಾದನು. ವಾಲಿಯ ಬೆನ್ನನ್ನೇ ಗುರಿ ಮಾಡಿಕೊಂಡು ಮೃತ್ಯು ಬಾಣವನ್ನು ಬಿಟ್ಟನು! ಸ್ವರ್ಗದ ಐರಾವತವು ಕಲ್ಪತರುವಿನೊಡನೆ ನೆಲಕ್ಕೆ ಬೀಳುವಂತೆ ವಾಲಿ ಧರೆಗೆ ಉರುಳಿದನು.

* * *

ರಾಮಾದಿಗಳು 'ಉಫೆ' ಎಂದು ಹೇಳುತ್ತ ಓಡಿ ಸುಗ್ರೀವನನ್ನು ತಬ್ಬಿಕೊಂಡರು. ಸಂಭ್ರಮ ತಗ್ಗಲು, ನೆತ್ತರ ಕೆಸರಿನಲ್ಲಿ ತಾನು ಆಳಿದ ಇಳೆಗೆ ಉರುಳಿಬಿದ್ದಿರುವ ವಾಲಿಯನ್ನು ನೋಡಿದರು. ಅವರಿಗೆಲ್ಲ ಖಿನ್ನತೆ ಆವರಿಸಿತು. ಹಗೆಯಾದರೇನು ಹಿರಿದಾದದು ಅಳಿಯಲು ಹಿರಿತನಕ್ಕೆ ನೋವಾಗದೆ ಇರುತ್ತದೆಯೇ? ತಾನು ಯಾರ ಬಗ್ಗೆ ಪರೋಕ್ಷವಾಗಿ ಕೇಳಿದ್ದನೋ ಆ ವೀರನ ಶರೀರದ ಹತ್ತಿರ ನಿಂತು ನೋಡುತ್ತ ರಾಮನು – ತನ್ನೊಳಗೆ ತಾನು ತನ್ನ ಬಿಲ್ ಜಾಣ್ಮೆಯನ್ನು ಬಯ್ದುಕೊಂಡನು.

ಮಲೆಯ ತಂಪುಗಾಳಿ ಬೀಸಲು ವಾಲಿಯು ಚೇತನದ ಬೆಳಕಿಂಡಿ ತೆರೆವಂತೆ ನಿಧಾನವಾಗಿ ಕಣ್ಣು ತೆರೆದನು. ಸುತ್ತುವರೆದಿದ್ದವರನ್ನು ಗುರುತಿಸುವಂತೆ ನೋಡುತ್ತ,

'ಏನು ಮಾಡಿದೋ ಸುಗ್ರೀವ! ಮುದ್ದಾಡಲೆಂದು ಬಂದ ಪ್ರೀತಿಯ ತೋಳುಗಳನ್ನು ಕಡಿದೆಯಲ್ಲೋ! ಆಃ ನನಗೆ ಆ ವೀರನನ್ನು ತೋರಿಸು, ಬೆನ್ನಿಗೆ ಬಾಣ ಹೂಡಿದ ಕಲಿ ರಾಮನನ್ನು...!'

ಎಂದು ಉದ್ವೇಗಕ್ಕೊಳಗಾಗಿ ನುಡಿಯುತ್ತ, ರಾಮನ ಕಡೆ ದೃಷ್ಟಿ ಹರಿಸಿ ಮಾತು ಮುಂದುವರಿಸಿದನು. 'ನೀನಾರೊ ವೀರವೇಶಿ? ಬಿಲ್ಲನ್ನು ಹಿಡಿದಿರುವ ನೀನೇ ರಾಮನೇ? ವೀರ ರಾಜಕುಲದವನಾಗಿ ಈ ಕೀಳುತನಕ್ಕೇಕೆ ಕೈ ಹಾಕಿದೆ? ಹೆತ್ತೂರೆಡೆಗೆ ತಮ್ಮನನ್ನು ಕೊಂಡೊಯ್ಯುತ್ತಿದ್ದ ಅಣ್ಣನ ಬೆನ್ನಿಗೆ ಹೇಡಿತನದಿಂದ ಬಾಣಬಿಟ್ಟು ಕೊಂದೆಯಲ್ಲ! ತಮ್ಮ ಸುಗ್ರೀವ, ನಿನ್ನನ್ನು ಮನಸಾರೆ ಹೊಗಳುತ್ತಿದ್ದ ನಿನ್ನ ಅತ್ತಿಗೆಯ ಬಾಳಿಗೆ ಕಿಚ್ಚಿಟ್ಟೆಯಲ್ಲೋ? ಓ ರಾಮ, ನಿನ್ನ ಕಲಿತನಕ್ಕೆ ಧಿಕ್ಕಾರ! ನಿನ್ನ ಅರಸು ಕೀರ್ತಿಗೆ ಧಿಕ್ಕಾರ! ಹೇಡಿಯ ರೀತಿ ಅವಿತುಕೊಂಡು ದೂರದಿಂದ ಉಗ್ರ ಬಾಣ ಬಿಟ್ಟು ನೀನು ಬದುಕಿಕೊಂಡೆ! ಈ ಮೂರು ಲೋಕಗಳಲ್ಲಿ ವಾಲಿಯನ್ನು ಕೆಣಕಿ ಬದುಕಿದವರು ಯಾರೂ ಇಲ್ಲ. ಸ್ವಾರ್ಥಕ್ಕಾಗಿ ಕೀರ್ತಿಯನ್ನು ಬಲಿಕೊಡುವ ಹೆಂಬೇಡಿ ನೀನು! ಚಿಃ ಸುಡಲಿ, ನಿನ್ನ ಈ ಹೊಲೆತನದ ಕೊಲೆಯ ಬಾಳು!'

ಬೆನ್ನನ್ನು ಹೊಕ್ಕು ಹೊಟ್ಟೆಯಿಂದ ಇಣುಕುವ ಸರಳು, ಸುರಿಯುವ ಕೆನ್ನೀರು, ಸಾವಿನ ಕಡೆ ಮುಖ ಮಾಡಿದ ನಡುಕು ದನಿ ಎಲ್ಲವೂ ವಾಲಿಯ ಕಡೆ ನಿಂತು ವಾದಿಸುತ್ತಿರಲು ರಾಮನು ಗದ್ಗದನಾಗಿ ಹೇಳಿದನು:

'ಸುಗ್ರೀವನ ಅಣ್ಣನೇ, ವಿಧಿಯ ವಿನ್ಯಾಸವನ್ನು ನಿಂದಿಸಿದರೆ ಫಲವೇನು?'

ಆ ಮಾತಿಗೆ ಕೊಂಕು ನಗೆಯಿಂದ ವಾಲಿ ಉತ್ತರಿಸಿದ:

'ನಿನ್ನ ಹೆಂಡತಿಯನ್ನು ರಾಕ್ಷಸ ಕದ್ದೊಯ್ದದ್ದು ವಿಧಿಲೀಲೆ! ನೀನೇಕೆ ಪರಿತಪಿಸುತ್ತಿರುವೆ?'

'ನಿನ್ನ ವಿಧಿ ನಿನಗೆ, ರಾಕ್ಷಸನ ವಿಧಿ ರಾಕ್ಷಸನಿಗೆ, ಕೇಳು ನಿನ್ನಂತೆ ಪತಿವ್ರತೆಗೆ ಆಶಿಸಿದ ರಾಕ್ಷಸ ನಾಶವಾಗುತ್ತಾನೆ.'

'ಸುಳ್ಳು, ಸುಳ್ಳು, ಸುಳ್ಳು!' ಎಂದು ಹೇಳುತ್ತ, ಮಹಾವಾನರನು ಕಿವಿ ಮುಚ್ಚಿಕೊಂಡು ಸತ್ಯವನ್ನು ಕೂಗಿ ಹೇಳಿದ, 'ರುಮೆ ನನಗೆ ಮಗಳು, ತಾರೆಯೇ ಅದಕ್ಕೆ ಸಾಕ್ಷಿ! ಹೇಡಿತನಕ್ಕೆ ಹುಸಿನಿಂದೆಯ ಬೆಸುಗೆಯೇಕೊ?'

'ನಿರ್ದೋಷಿಯಾದ ತಮ್ಮನು ವಿನಯದಿಂದ ಬೇಡಿಕೊಂಡರೂ ತಾಯಿನಾಡಿನಿಂದ ಗೆಳೆಯರೊಡನೆ ಹೊರದೂಡಿದ್ದಕ್ಕೆ ಈ ಶಿಕ್ಷೆ!'

'ಅಯ್ಯೋ ಪುಣ್ಯಾತ್ಮ ದುಷ್ಟ ಶಿಕ್ಷೆಗೆ ತಡಮಾಡಿ ಬಂದೆಯಲ್ಲ, ನಾನೀಗ ಆ ಕೋಪಿಯೂ ಅಲ್ಲ, ಪಾಪಿಯೂ ಅಲ್ಲ. ಪ್ರೀತಿ, ಪಶ್ಚಾತ್ತಾಪದಿಂದ, ಭ್ರಾತೃ ಮೈತ್ರಿಯಿಂದ ಶುದ್ಧನಾಗಿರುವ, ನಿರ್ವೈರನು.... ಹೇಡಿತನದಿಂದ ಕೊಂದೆಯೆಂದೆನೇ ಹೊರತು, ನನಗೆ ನಿನ್ನೊಡನೆ ಬೇರೆ ದ್ವೇಷವಿಲ್ಲ'

ವಾಲಿಯ ಮುಖಸತ್ತ್ವದಿಂದ ಹೊಮ್ಮಿದ ಮಾತನ್ನು ಶಂಕಿಸದೆ ರಾಮನು ಸುಗ್ರೀವನೆಡೆಗೆ ನೋಡಿದನು. ಅಶ್ರುಪೂರಿತನಾದ ಅವನು 'ಈತನ ಮನ ಪರಿವರ್ತನೆ ನನಗೆ ತಿಳಿದಿರಲಿಲ್ಲ' ಎಂದು ಹೇಳಿದನು. ಹಿರಿಯನಾದ ಜಾಂಬವಂತರು 'ಇಂದ್ರನ ಪುತ್ರ ವಾಲಿ ಎಂದೂ ಸುಳ್ಳಾಡಿದವನಲ್ಲ' ಎಂದು ಕಣ್ಣೊರಸಿಕೊಂಡರು.

ನೊಂದ ಹೃದಯದ ಆಂಜನೇಯನು 'ವಾಲಿಯು ಕ್ರೂರ ವಿಧಿಗೆ ಬಲಿಯಾದ' ಎಂದು ಹೇಳುತ್ತ ಬಾಗಿ ವಾಲಿಯನ್ನು ಎತ್ತಿದನು. ಹುಲ್ಲಿನ ಹಾಸಿಗೆ ಮೇಲೆ ಮಲಗಿಸಿದನು. ಲಕ್ಷ್ಮಣನು ತನ್ನ ತೋಳುಗಳನ್ನು ತಲೆ ದಿಂಬಾಗಿಸಿದನು. ರಾಮನು ಧನುರ್ಬಾಣಗಳನ್ನು ನೆಲಕ್ಕೆ ಎಸೆದು ವಾಲಿಯ ಮೈಗೆ ಸೋಂಕುವಂತೆ ಕುಳಿತು ಕಣ್ಣೀರ್ಗರೆಯುತ್ತ ಹೇಳಿದನು:

'ಮಹಾವೀರನೇ, ತಪ್ಪಾಯಿತು ಕ್ಷಮಿಸು. ಬ್ರಹ್ಮನ ವರವೇ ನಿನಗೆ ಶಾಪವಾಯಿತು. ನನ್ನ ಕೀರ್ತಿ ಮಸುಕಾಗುವಂತೆ ನನ್ನನ್ನು ಮರೆಯಲ್ಲಿ ಅಡಗಿಸಿತು. ತಪ್ಪೊಪ್ಪಿಕೊಳ್ಳುವುದು ವೀರನ ಸಲ್ಲಕ್ಷಣ. ಸೀತೆಯ ವಿರಹದಿಂದ ನನಗೆ ಮಂಕು ಬಡಿದಿದೆ. ಸುಲಭೋಪಾಯಕ್ಕೆ ಒಳಗಾಗಿ ನನ್ನ ಕೀರ್ತಿಯನ್ನು, ಧರ್ಮವನ್ನು, ನಿನ್ನನ್ನು ಆಹುತಿಗೈದೆ.'

ಮೃತ್ಯು ಮುಖವಾದ ಜೀವಕ್ಕೆ ಸತ್ಯವು ಸನಿಹವಾಗುವುದು ಎಂಬಂತೆ ಪಕ್ಕದಲ್ಲಿ ಕುಳಿತು ರೋದಿಸುತ್ತಿದ್ದ ರಾಮನಲ್ಲಿ ದೃಷ್ಟಿಯಿಟ್ಟು ವಾಲಿ ನುಡಿದ:

'ನಿನ್ನ ಮಹಾತ್ಯಾಗ ಮತ್ತು ಧೈರ್ಯವನ್ನು ಕೇಳಿದ್ದೆ. ಕಣ್ಣಾರೆ ಕಾಣುವ ಸುಯೋಗ ಇಂದು ಒದಗಿದೆ. ನೀನು ದಿಟವಾಗಿ ಸತ್ಯವ್ರತ. ಇಲ್ಲವಾದರೆ ಸೋತು ಸಾಯುವವರ ಮುಂದೆ ತಪ್ಪೊಪ್ಪಿಕೊಳ್ಳುವರೆ? ತಪ್ಪು ನಿನ್ನೊಬ್ಬನದೇ ಅಲ್ಲ, ನೀನು ಹೇಳಿದಂತೆ ವಿಧಿಯ ಸಂಕಲ್ಪ ಬೇರೇನಿರುವುದೊ ಗೊತ್ತಿಲ್ಲ.'

'ಮಹಾವೀರನೇ, ನೀನು ಶುದ್ಧ.'

'ಆ ಮಾತು ಅಂತಿರಲಿ, ನನ್ನ ಸ್ನೇಹದಿಂದ ಸುಗ್ರೀವನ ಹಾಗೂ ನಿನ್ನ ಬಯಕೆ ಒಮ್ಮೆಯೇ ಕೈಗೂಡುತ್ತಿತ್ತು. ನೀವೆಲ್ಲರೂ ಕಷ್ಟಪಟ್ಟು ಸಾಧಿಸುವ ಕೆಲಸವನ್ನು ಲೀಲಾಜಾಲವಾಗಿ ನಾನೊಬ್ಬನೇ ಸಾಧಿಸುತ್ತಿದ್ದೆ. ಆದರೆ ವಿಧಿಯ ಇಚ್ಛೆಯೇ ಬೇರೆ! ಕಳೆದು ಹೋದುದನ್ನು ಚಿಂತಿಸಿ ಫಲವೇನು?'

ಎಂದು ಹೇಳುವಾಗ್ಗೆ ವಾಲಿಗೆ ಉಬ್ಬುಸ ಹೆಚ್ಚಾಯಿತು. ಸುಗ್ರೀವ ತನ್ನ ಅಣ್ಣನ ಅಡಿಗಳಲ್ಲಿ ಹಣೆಚಾಚಿ ಅಳತೊಡಗಿದನು. ನೀಲನು ಹಳ್ಳದ ನೀರನ್ನು ಬೊಗಸೆಯಲ್ಲಿ ತಂದು ಕುಡಿಸಿದನು. ನಳನು ಎಲೆಯಿಂದ ಗಾಳಿ ಬೀಸಿದನು. ಮರುಗೆದೆಯ ರಾಮಚಂದ್ರನು ಬೆವರಿಂದ ಹಣೆಗೆ ಅಂಟಿದ ಕೂದಲನ್ನು ಸರಿಸಿ ಸಂತೈಸಿದನು. ವಾಲಿಯು ಕಣ್ತೆರೆದು ಶೂನ್ಯವನ್ನು ದಿಟ್ಟಿಸುತ್ತಾ ಉಸುರಿದನು:

'ತಾರೆ ಅಂಗದರಿಗೆ ಸುದ್ದಿ ಹೋಯಿತೆ? ಕಣ್ಣಿನ ಬೆಳಕು ಆರುವ ಮೊದಲು ನನ್ನ ಬಾಳಿನ ಬೆಳಕನ್ನು ನೋಡುವ ಆಸೆಯಾಗಿದೆ.'

'ಸುದ್ದಿ ಆಗಲೇ ಹೋಗಿದೆ' ಎಂದು ಆಂಜನೇಯ ಹೇಳಲು,

'ನೀನು ಆಂಜನೇಯನಲ್ಲವೆ?' ಎಂದು ಪ್ರಶ್ನಿಸಿದ ವಾಲಿಯ ಕಣ್ಣಿನ ನೋಟ ಮಂಕಾದುದನ್ನು ಗಮನಿಸಿದ ಅವನು ವಿನಯದಿಂದ ಕೇಳಿದ, 'ಅಹುದು. ಏನಪ್ಪಣೆ?'

'ಮಗು ಅಂಗದನ... ಸುಗ್ರೀವನೆಲ್ಲಿ?'

'ಅಣ್ಣಾ, ಇಲ್ಲಿಯೇ ಇರುವೆನು.? ಎಂದು ಸುಗ್ರೀವ ಅಣ್ಣನ ಮುಖ ನೋಡಿದ.

ವೈರರಹಿತ, ಪ್ರೀತಿಭರಿತ ದೃಷ್ಟಿಯಿಂದ ಅವನ ಮುಖ ನೋಡುತ್ತಾ ವಾಲಿಯು, 'ತಮ್ಮ ದುಃಖವನ್ನು ಬಿಡು. ವಾನರ ಕುಲದ ಕೀರ್ತಿ ಜಗತ್ತಿಗೆ ಹಬ್ಬುವಂತೆ ನೀನು ಈ ನಮ್ಮ ಅತಿಥಿ ಆರ್ಯರಿಗೆ ನೆರವಾಗು. ಇದೇನಿದು ಶಬ್ದ? ಸ್ವರ್ಗದ ಮಧುರ ಧ್ವನಿ ಭೂಮಿಗೆ ಧುಮುಕುತ್ತಿದೆ.'

'ಅಯ್ಯೋ, ಅಣ್ಣ ಹತ್ತಿರ ಬರುತ್ತಿರುವುದು ಕಿಷ್ಕಿಂಧೆ.'

'ಏನೆಂದೆ? ಅಹುದು ಸಂಧ್ಯೆ ಹತ್ತಿರ ಬರುತ್ತಿದೆ! ಮಲೆಯ ಮೇಲೆ ಎಂಥಹ ಸುಂದರ ಸಂಧ್ಯೆ! ಅಃ ನನ್ನ ಕಿಷ್ಕಿಂಧೆ!

'ಸುಗ್ರೀವ ನಿನಗೆ ಈಜು ಕಲಿಸುವಾಗ, ನೀನು ಪಂಪಾ ಸರೋವರದಲ್ಲಿ ಮುಳುಗಿದೆ. ಆಗ ನಾನು ಮುಳುಗಿ ನಿನ್ನನ್ನು ಮೇಲೆತ್ತಿದೆ. ಆ ಪುಣ್ಯದ ಸುಖ ಈಗ ಅರ್ಥವಾಗುತ್ತಿದೆ! ಆಂಜನೇಯನೇ ಮರಕೋತಿಯಾಟ, ಚಿಣ್ಣ ಕೋಲಾಟಗಳನ್ನು ಮರೆತೆಯೇನು? ಮರೆಯ ಬೇಡ. ಬಾಳಂಚಿನಲ್ಲಿ ನಿಂತು ಸತ್ಯವನ್ನು ಹೇಳುತ್ತೇನೆ ಕೇಳು. ಆ ಜಳ್ಳು ಗಟ್ಟಿ. ನಾವು ಗಟ್ಟಿ ಎಂದು ತಿಳಿದಿರುವುದೆಲ್ಲ ಜಳ್ಳು, ಬರಿ ಜಳ್ಳು! ಸಾವೆಂಬ ಗಾಳಿ ತೂರಿ ಬಂದಾಗ ಅರಿವಾಗುತ್ತದೆ'.

ಹೀಗೆ ಹೇಳುತ್ತ ವಾಲಿ ಕಣ್ಣು ಮುಚ್ಚುತ್ತಿರುವಾಗ ತಾರೆ ಅಂಗದಕುಮಾರನೊಡನೆ ಹತ್ತಿರಕ್ಕೆ ಬಂದಳು. ತನ್ನ ಪತಿಯ ಪ್ರಾಣ ಹೋಗಲು ತಾರೆಯು ರುಮೆಗೆ ಅಂಗದನ ಯೋಗಕ್ಷೇಮವನ್ನು ಒಪ್ಪಿಸಿದಳು. ಕನಿಕರದಿಂದ ಮೈದುನನನ್ನು ನೋಡಿದಳು. ರಾಮನನ್ನು ಸಂತೈಸಿದಳು. ಎಲ್ಲರಿಗೂ ರಾಮನ ಸಹಾಯಕ್ಕೆ ಹೋಗಲು ತಿಳಿಸಿದಳು. ಅಂಗದನ ಮೈದಡವಿ ರಾಮಸೇವೆಗೆ ಅರ್ಪಿಸಿದಳು. ಪತಿಯ ಆತ್ಮವನ್ನು ಸೇರಲು ಚಿತೆಯೇರಿದಳು.



4

# ಮಾರೀಚ

ದಂಡ ಕಾರಣ್ಯದ ಮಲೆಯ ಮುಡಿಯ ಆಶ್ರಮದಲ್ಲಿ ಬೃಹತ್ಕಾಯದ, ಕೆಂಪು ಮೀಸೆಯ ಹುಲಿಯ ಮುಖದ ರಾಕ್ಷಸ ಮಾರೀಚನು ಒಳಗೆ ಮೃದುಮನದ ಆಕಳಿನಂತಾಗಿ ಗಿಡಗಳಿಗೆ ನೀರೆರೆಯುತ್ತಿದ್ದನು. ಗೊನೆ ಬಿಟ್ಟು ಬಾಗಿದ ಬಾಳೆಯನ್ನು ತುಂಬು ಮನದಿಂದ ನೋಡಿ ತಲೆಬಾಗಿದನು. ಗಾಳಿಗೆ ಗಿಲಗಿಲಕೆನ್ನುವ ಅಡಿಕೆಯ ಸದ್ದಿಗೆ ಮನಬಿರಿದು ಮೇಲೆ ನೋಡಿದನು. ಏಲಕ್ಕಿಯ ಕಂಪಿನಲ್ಲಿ ಸುಖಪಟ್ಟನು. ಜಟಾವಲ್ಕಲ ಧಾರಿಯಾಗಿ ಮುನಿಯಾಗಿದ್ದ ಅವನು ಸಾತ್ವಿಕ ಬಾಳಿನ ಸಾಧನಾ ಪಥದಲ್ಲಿದ್ದನು.

ರಕ್ಕಸ ಬಾಳಿನ ದೀರ್ಘ ಕ್ರೌರ್ಯಕ್ಕೆ ಹೇಸಿ, ಮುನಿಜನರ ಅಹಿಂಸಾ ಧ್ಯಾನಮಯ ನಡೆನುಡಿಯ ಆಂತರ್ಯದ ಶಾಂತಿಗೆ ತೊಡಗಿದ್ದನು. ಅವನು ಪರಮ ಮಾಯಾನಿಪುಣನು ಕಾಮರೂಪಿಯು ಆಗಿದ್ದರೂ ಅದರ ಅಸತ್ಯದ ತಂತ್ರಕ್ಕೆ ಬೆನ್ನುಕೊಟ್ಟು ಸತ್ಯದ ಸಹಜ ಬದುಕಿನ ಆನಂದದಲ್ಲಿ ಒಂದಾಗಿದ್ದನು. ತನ್ನನ್ನು ತಾನು ಶೋಧಿಸಿಕೊಳ್ಳುತ್ತ ಹಿಂಸೆ, ದ್ವೇಷ, ಮತ್ಸರಗಳನ್ನು ಗೆಲ್ಲುವ ಮಾರ್ಗಾನುಸಂಧಾನದಲ್ಲಿ ತಪಸ್ವಿಯಾಗಿದ್ದನು. ನಿಸರ್ಗದ ಮೌನ ಶಾಂತ ಧೀರತೆಯನ್ನು ತನ್ನ ಜೀವನ ಸೌಂದರ್ಯವಾಗಿಸಿಕೊಳ್ಳುವತ್ತ ಲಕ್ಷ್ಯವಹಿಸಿದ್ದನು. ಆಗ ಆಶ್ರಮದ ಮುಂದೆ ಕಿವಿಗಡಚಿಕ್ಕುವ ಶಬ್ದದೊಂದಿಗೆ ಆವೇಗದಲ್ಲಿ ಒಂದು ಪುಷ್ಪಕವಿಮಾನ ಬಂದು ನಿಂತಿತು.

ಅದರಲ್ಲಿದ್ದ ರಾಕ್ಷಸೇಶ್ವರ ರಾವಣನು ತನ್ನ ತಂಗಿ ಚಂದ್ರನಖಿಯನ್ನು ಅವಮಾನಪಡಿಸಿ, ತನ್ನ ಸಹೋದರರಾದ ಖರಭೂಷಣರನ್ನು ಯುದ್ಧದಲ್ಲಿ ವಧಿಸಿದ ದಶರಥನ ಮಗ ರಾಮಚಂದ್ರನ ವಿರುದ್ಧ ಕೋಪಾವಿಷ್ಟನಾಗಿದ್ದನು. ತನ್ನ ಸಹೋದರಿಯ ಅವಮಾನಕ್ಕೆ ಪ್ರತಿಯಾಗಿ ರಾಮನ ಅರ್ಧಾಂಗಿಯನ್ನು ಅವಮಾನಪಡಿಸಲು ನಿಶ್ಚಯಿಸಿ ಬಂದಿದ್ದನು. ಅವನ ಕೋಪದ ಜೊತೆಗೆ ಜಾನಕಿಯನ್ನು ಪಡೆಯುವ ಕಾಮ ಚಾಪಲ್ಯ ಹೊಂದಿಕೊಂಡು ರಾಜಕಾರಣದ ನೆಪ ಗರಿಗೆದರಿತ್ತು. ಮೋಸದಿಂದ ಸೀತೆಯನ್ನು ಅಪಹರಿಸುವ ಹುನ್ನಾರದಲ್ಲಿ ಅಲ್ಲಿಗೆ ಬಂದಿಳಿದನು.

ಸೂರ್ಯನಂತೆ ಹೊಳೆಯುತ್ತ, ಮಧುಮಾಸದಂತೆ ಸುಂದರನಾಗಿ ಶ್ರೀಗಂಧದ ಸುವಾಸನೆ ಹೊಮ್ಮಿಸುತ್ತ ಬಂದ ದೈತ್ಯೇಂದ್ರನನ್ನು ತಾಟಕಾಸುತ ಮಾರೀಚ ಮುನಿ ನೋಡಿದ. ಚಕ್ರವರ್ತಿಗೆ ಸೊಗಸಿನ ಸ್ವಾಗತವನ್ನು ಬಯಸಿ ಆಶ್ರಮದೊಳಕ್ಕೆ ಕರೆದೊಯ್ದು ಉಪಚರಿಸಿದ. ದೊರೆಯನ್ನು ಗೌರವಿಸುವ ಯುಕ್ತ ನುಡಿಯಲ್ಲಿ ಹೇಳಿದ:

'ರಾಕ್ಷಸ ಕುಲದ ಸಾರ್ವಭೌಮನಾದ ನೀನು ನನ್ನ ಆಶ್ರಮಕ್ಕೆ ಬಂದಿರುವುದು – ನನ್ನ ತಪಸ್ಸಿಗೆ ಇಂದು ಸಿದ್ಧಿ ದೊರೆತಂತಾಗಿದೆ!'

ಋಷಿಗಳಿಗೆ ವಿಪತ್ತನ್ನುಂಟು ಮಾಡಲು ಕಂಕಣಬದ್ಧನಾಗಿದ್ದು, ಆರ್ಯರಿಗೆ ಕಂಟಕನಾಗಿದ್ದ ಮಾರೀಚನು ಜಟಾವಲ್ಕಲಧಾರಿಯಾಗಿದ್ದಾನೆ! ಮುನಿವೇಷದಲ್ಲಿದ್ದಾನೆ! ಅದನ್ನು ಕಂಡ ಪುಲಸ್ತ್ಯನು ಕಿರುನಗೆ ಬೀರುತ್ತ ನುಡಿದ:

'ಮಾವ, ನಿನ್ನನ್ನು ಮರೆಯಲು ಸಾಧ್ಯವೆ? ನಾನು ಯಾವಾಗಲೂ ನಿನಗೆ ಕೃತಜ್ಞನಾಗಿದ್ದೇನೆ.

'ಓ ಮಹಾಮಂತ್ರಿಯೇ, ಬಾಳುವವರಿಗೆ ಮತ್ತು ಆಳುವವರಿಗೆ ನಿನ್ನಂತಹವರು ಉಸಿರಲ್ಲವೆ? ದೊರೆಯ ಶಕ್ತಿಗೆ ಮಂತ್ರಿಯ ಜಾಣ್ಮೆ ನೆರವಾಗದಿದ್ದರೆ ಜಯ ಸಾಧ್ಯವೆ? ನೀನು ನಮ್ಮ ಪ್ರಮುಖ ಸಚಿವ. ಹಿಂದೆ ಎಷ್ಟೋ ಸಾರಿ ನೀನು ನನಗೆ ರಾಜಕಾರಣದಲ್ಲಿ, ರಣದಲ್ಲಿ, ಸ್ವಂತ ಸಂತೋಷ ಕಾರ್ಯಗಳಲ್ಲಿ ನೆರವಾಗಿರುವುದನ್ನು ನಾನು ಮರೆಯಲಾರೆ.'

'ಅದು ಅಮಾತ್ಯನಾಗಿ ನಾನು ಮಾಡಿದ ಕರ್ತವ್ಯ. ಅದರಲ್ಲೇನು ವಿಶೇಷ?'

'ಮಾವ, ನಿನಗೂ ನಾನು ಹಾಗೆಯೆ ಸಹಾಯ ಮಾಡಿದೆ ಎಂಬುದು ನನಗೊಂದು ಹೆಮ್ಮೆ. ಆದರೆ ನೀನು ಕಷ್ಟಕೋಟಲೆಯಲ್ಲಿ ನವೆದು ಹೋದೆ. ಬದುಕನ್ನೇ ಸಾಹಸಕ್ಕೆ ಬಲಿಕೊಟ್ಟೆ. ವೀರನಾಗಿಯೂ ತುಂಬ ಬಳಲಿದೆ. ವಿಧಿಗೆ ಸೋತೆ; ಮುನಿವೃತ್ತಿಯನ್ನು ಹಿಡಿದೆ'

'ಮುನಿತನವು ನನಗೆ ಮುನಿಯದ ಸ್ವನಿಯಂತ್ರಣ ಸಾಧನವಾಯಿತು.'

'ಓಹ್, ನೀನು ಮುನಿಯಪ್ಪ! ಮಾರೀಚ ಮುನಿವರ್ಯನೇ, ನಿನ್ನನ್ನು ನೋಡಿ ಮರುಕವಾಗುತ್ತಿದೆ. ನಿನ್ನ ತಾಯಿಯನ್ನು ಕೊಲ್ಲಿಸಿದ ಆ ವಿಶ್ವಾಮಿತ್ರನು, ಕೊಂದ ಆ ಉತ್ತರದ ಬಡರಾಮನು ಇನ್ನೂ ಬದುಕಿದ್ದಾರೆ. ಹಾಗಾಗಿ ನಮ್ಮ ದುರ್ವಿಧಿ

ಕೊನೆಯಾಗಿಲ್ಲ. ನೀನು ಮುಯ್ಯಿಗೆ ಮುಯ್ಯಿ ತೀರಿಸಲಾಗದಿದ್ದರೆ, ನಾನಾದರೂ ತೀರಿಸಲು ನೀನು ಒಪ್ಪುವೆಯಲ್ಲವೆ? ಪ್ರೇತಲೋಕದಲ್ಲಿರುವ ತಾಯಿ ತಾಟಕೆ ತೃಪ್ತಳಾಗುವಂತಹದನ್ನು ಮಾಡಲು ಪ್ರಯತ್ನಶೀಲನಾಗು.

'ಮುನಿಯೇ ಕೇಳು. ಸಾತ್ವಿಕತೆಯು ಬಲಹೀನನ ನಪುಂಸಕತೆ. ತಪವೆಂಬುಂದು ಹೇಡಿತನಕ್ಕೊಂದು ನೆಪ.'

ಮಾರೀಚನು ಅಳಿಯನ ಮುಚ್ಚುಮರೆಯ ಮಾತುಗಳನ್ನು ತಲೆಬಾಗಿಸಿಕೊಂಡು ಮೌನವಾಗಿ ಕೇಳಿದನು. ಆ ಈಟಿಯ ಇರಿತದಂತಹ ನುಡಿಗಳನ್ನು ತಾಳಲಾರದೆ ತಾಳಿಕೊಂಡನು. ಕಲ್ಲಿನಂತೆ ಮೌನವಾಗಿ ಹಿಂದಿನದೆಲ್ಲ ನೆನೆಸಿಕೊಂಡನು. ರಾಮನಿಂದ ಹತಳಾಗಿ, ಅಂತ್ಯಸಂಸ್ಕಾರದ ಭಾಗ್ಯವಿಲ್ಲದೆ ಕಾಡಿನಲ್ಲಿ ಕೊಳೆತು ನಾರಿದ ತನ್ನ ತಾಯಿಯ ಹೆಣದ ಘೋರ ಚಿತ್ರವು ಕಣ್ಮುಂದೆ ಸುಳಿಯಿತು. ಏನನ್ನೂ ಹೇಳಲಾಗದೆ ಒಳಗೊಳಗೆ ಮೌನವಾಗಿ ರೋದಿಸಲು ಕಣ್ಣೀರು ಹರಿಯಿತು.

ದಿಗ್ಗಜನಾದ ಬಲಶಾಲಿ ಮಾಯಾಸಮರ್ಥನು ಹಾಗೆ ಗೋಳಿಡುವುದನ್ನು ಕಂಡು ಲಂಕೇಶ್ವರನು ತಟ್ಟನೆ ಮೇಲೆದ್ದನು. ಮಾವನನ್ನು ಅಪ್ಪಿಕೊಂಡನು. ಮತ್ತೆ ಮತ್ತೆ ಸಂತೈಸಿದನು. ಹುಲಿಯು ಹುಲಿಯ ಮುಖಕ್ಕೆ ಮುಖವಿಟ್ಟು ನೆಕ್ಕಿ ಮುದ್ದಾಡುವಂತೆ ಮುದ್ದಾಡಿದನು. ಆತ್ಮೀಯವಾದ ನುಡಿ ಸೂಸುತ್ತ ಮಾರೀಚನ ಮನಸ್ಸನ್ನು ಸೂರೆ ಮಾಡಿದನು.

'ಮಾವ ಈ ಅತಿಯಾದ ದುಃಖವನ್ನು ಬಿಡು. ದಿಕ್ಕಿಲ್ಲದವನಂತೆ ಏಕೆ ದುಃಖಿಸುವೆ? ಲಂಕೆಗೆ ಲಂಕೆಯೇ ಎದ್ದು ನಿನಗೆ ನೆರವಾಗಲು ತೋಳು ಚಾಚುತ್ತಿದೆ. ಇದೊ ನೋಡು! ನಾನೇ ಆ ತೋಳು! ತಪೋಮಗ್ನನಾದವನೆ, ನಿನಗೆ ಲೋಕ ಸಾಮಾನ್ಯರ ಸಂಕಟ ಹೇಗೆ ತಿಳಿಯುತ್ತದೆ?' ಎಂದು ತಂಗಿ ಚಂದ್ರನಖಿಯಿಂದ ಕೇಳಿದ ಪಂಚವಟಿಯ ಮತ್ತು ದಂಡಕಾರಣ್ಯದ ಅವಮಾನವನ್ನು, ಪರಾಜಯವನ್ನು ಹೇಳಿದನು. ಅದನ್ನು ಕೇಳಿದ ಮಾರೀಚನ ಕಣ್ಣಿನಲ್ಲಿ ಏನೋ ಭೀತಿಯ ಛಾಯೆ ಸುಳಿಯಿತು. ಅವನ ಮುಖ ಭಯದಿಂದ ಬಿಳಿಚಿಕೊಂಡಿತು. ಹೆದರುತ್ತ ಲಂಕೇಶನನ್ನು ನೋಡಿದನು.

ಅದನ್ನು ವೀಕ್ಷಿಸಿದ ರಾವಣನು ಕೋಪದಿಂದ ಕಿಡಿಕಿಡಿಯಾಗಿ ಆರ್ಭಟಿಸಿದನು. ವ್ಯಾಘ್ರ ಘರ್ಜನೆಗೆ ಮಲೆ ನಡುಗುವ ರೀತಿ ಮಾರೀಚನ ಎಲೆಮನೆ ನಡುಗಿತು.

'ಎಲೆ ಸಿಂಹಬಲಶಾಲಿಯೇ, ಅಧೈರ್ಯವನ್ನು ಬಿಡು. ಹೆಂಬೇಡಿಯಾಗಬೇಡ. ಧೈರ್ಯ ವೃಕ್ಷದ ಬೇರಿಗೆ ಬಿಸಿನೀರನ್ನು ಸುರಿಯಬೇಡ. ರಾಕ್ಷಸ ಕುಲದ ಬಲದ ಗೌರವದ ಗಂಟಲನಾಳವನ್ನು ಕೊಯ್ಯಬೇಡ.'

ಎಂದು ಹೇಳುತ್ತ ಬೆನ್ನಹಿಂದೆ ಕೈಗಳನ್ನು ಕಟ್ಟಿಕೊಂಡು ನೆಲವನ್ನೊದೆಯುತ್ತ, ಶತಪಥ ತಿರುಗಿದನು. ರಾಕ್ಷಸೇಶ್ವರನ ಆವೇಶಕ್ಕೆ ತಾಟಕಿಯ ಮಗ ತುಸು ಅಳುಕಿದನು. ಆದರೂ ಧೈರ್ಯವನ್ನು ತಂದುಕೊಂಡು ಹೀಗೆ ಹೇಳಿದನು:

'ಅಳಿಯನೇ, ಎಂದೂ ಮುಟ್ಟದಿರುವವರಿಗೆ ಕೆಂಡವು ಮಾಣಿಕ್ಯದಂತೆ ಕಾಣಿಸುತ್ತದೆ! ರಾಮನ ಪರಾಕ್ರಮದ ರುಚಿ ಸವಿದಿರುವ ನನಗೆ ನಿನ್ನ ಸಾಹಸದ ಮಾತುಗಳು ಬರಿಯ ಸೊಕ್ಕಿನದಾಗಿ ತೋರುತ್ತಿದೆ. ಅವನನ್ನು ಬಾಲ್ಯದಿಂದಲೂ ನೋಡಿ ತಿಳಿದಿದ್ದೇನೆ. ಅವನ ಸೊಕ್ಕನ್ನು ಇನ್ನಿಲ್ಲವಾಗಿಸಲು ಮನುಷ್ಯ ಸಾಧ್ಯವಾದ ಪ್ರಯತ್ನಗಳನ್ನು ಮಾಡಿದ್ದೇನೆ. ಅವನ ಮುಂದೆ ನನ್ನ ಕೈಚಳಕ, ಬಿಲ್‌ವಿದ್ಯೆ, ಮಾಯಾವಿದ್ಯಾಪರಿಣತಿ ಸೋತು ಹೋಗಿದೆ.

'ಆ ಖರನ ವೈರಿ ಎಂದಿಗೂ ಸೋಲುವುದಿಲ್ಲ; ಗೆಲ್ಲಲು ಅಸಾಧ್ಯನಾಗಿರುವನು. ದೈವವು ರಾಮನ ಪರವಾಗಿದ್ದು ಹೋರಾಡುತ್ತದೆ ಎಂದ ಮೇಲೆ ಬರಿಯ ಮನುಷ್ಯಶಕ್ತಿ ಸಾಲದಾಗುತ್ತದೆ. ಧರ್ಮ ಕವಚವೆ ರಕ್ಷೆಯಾಗಿರುವ ಆತನನ್ನು ಧರ್ಮದಿಂದಲೇ ಜಯಿಸಬೇಕೆಂದು ನಾನು ತಪೋಮಗ್ನನಾಗಿದ್ದೇನೆ.'

'ಎಲವೋ ಮಾರೀಚ, ನೀನು ಆ ಉತ್ತರದವರ ಮರುಳಿಗೆ ಮಂಕಾಗಿರುವೆ! ನರಮಾತ್ರನಾದವನನ್ನು ಪರಮ ದೈವವೆಂದು ಮೂರ್ಖರು ಆಡಿಕೊಂಡರೆ, ಶಿವ ಶಿವಾ, ಅದನ್ನೇ ದಿಟವೆಂದು ಬೆಪ್ಪನಾದ ನೀನು ನಂಬುವುದೆ? ಆ ನಂಬಿಕೆಯೇ ನಿನ್ನ ನೂರಾನೆಯ ಬಲವನ್ನು ಟೊಳ್ಳಾಗಿಸಿದೆ.'

'ಅದು ನಿನ್ನ ಅಭಿಪ್ರಾಯ'

'ಅಭಿಪ್ರಾಯ ಬಿಡು. ಒಂದು ಉಪಾಯವನ್ನು ಆಲೋಚಿಸಿ ಇಲ್ಲಿಗೆ ಬಂದಿದ್ದೇನೆ. ತಾಯಿಯ ಕೊಲೆಯಿಂದ ನೀನು, ಒಡಹುಟ್ಟಿದವರ ಕೊಲೆಯಿಂದ ನಾನು ಸಮದುಃಖಿಗಳೆ ಆಗಿದ್ದೇವೆ. ತಂಗಿಗೆ ಒದಗಿದ ಅಪಮಾನ ನಮ್ಮ ಕುಲಕ್ಕೆ ಕಳಂಕವನ್ನುಂಟು ಮಾಡಿದೆ. ಅದು ದಕ್ಷಿಣದವರ ಗೌರವಕ್ಕೆ ಉತ್ತರದವರ ಗರ್ವದ ವರ್ತನೆಯಾಗಿದೆ. ನಾವು ಸುಮ್ಮನಿದ್ದಷ್ಟು ನಮ್ಮ ದಸ್ಯು ಸಂಸ್ಕೃತಿ ಅವರಿಂದ ಸೂರೆ ಹೋಗುತ್ತದೆ.

'ಮಾರೀಚನೇ, ಯುದ್ಧ ನೀತಿಯೊಂದನ್ನೇ ನಂಬಿ ನೀನು ಸೋತಿರುವೆ. ವೈರಿಯನ್ನು ನಿರ್ವೀರ್ಯನನ್ನಾಗಿಸಲು ಹಲವು ತಂತ್ರಗಳಿವೆ. ಸೀತೆಯನ್ನು ಹೊತ್ತುಕೊಂಡು ಬರಲು ದಾಶರಥಿಯು ಮಾನಹಾನಿಗೆ ಒಳಗಾಗುತ್ತಾನೆ. ಶಕ್ತಿಹೀನನಾಗುತ್ತಾನೆ. ನಿಸ್ತೇಜನಾಗುತ್ತಾನೆ. ಹಿರಿದಾದ ಆಲದ ಮರವು ನೀರಿಲ್ಲವಾಗಲು ಒಣಗಿ ಗೆದ್ದಲುಗಳಿಗೆ ಉಣಿಸಾಗುವಂತೆ – ರಾಮನ ವಿಕ್ರಮವು ನಮ್ಮ ಪರಾಕ್ರಮಕ್ಕೆ ಸಿಕ್ಕಿ ಹುಡಿಯಾಗಿ ಹೋಗುತ್ತದೆ.'

'ರಾವಣನೇ, ನೀನು ನೆನೆದಿರುವ ಉಪಾಯ ಇದೇ ಏನು? ನಿನಗೆ ಇದನ್ನು ನೀತಿಯೆಂದು ಹೇಳಿಕೊಟ್ಟವರು ಯಾರು? ಇದು ಹದಿಬದೆಯ ಹರಣವಾಗಿ ಆ ಮೂಲಕ ನಿನ್ನ ಹಾಗೂ ಸಮಸ್ತ ಲಂಕೆಯ ಮರಣಕ್ಕೆ ನಾಂದಿ ಹಾಡುತ್ತದೆ. ತ್ರಿನೇತ್ರನನ್ನು ಕುರುಡಾಗಿಸಲು ಅವನ ಉರಿವ ಹಣೆಗಣ್ಣಿಗೆ ಕೈಯಿಕ್ಕಿ ಎಳೆಯುವ ಹೆಡ್ಡನ ರೀತಿ ನೀನು ಹರಟುತ್ತಿರುವೆ.

'ಓ ಕೈಕಸಿಯ ಕಂದ! ಮುಂದೆ ಏನಾಗುವುದೆಂದು ನೀನು ತಿಳಿಯೆ! ರಾಮನ

ಪರಾಕ್ರಮ ಏಕೆ? ಪಾವನ ಪತಿವ್ರತೆಯ ಹರಣವೇ ನಿನ್ನ ಬಾಳಿಗೆ ಉರಿಯಿಕ್ಕುವುದೆಂದು ತಿಳಿ.'

ಸಾತ್ವಿಕ ಮಾರೀಚನ ನುಡಿ ಕೇಳಿ ದಶಗ್ರೀವನು ಕಿಲಕಿಲನೆ ನಕ್ಕನು. ಹೂಂಕಾರದಿಂದಲೇ ನಾಯಿಗಳನ್ನು ಅಟ್ಟಿ ಕೆದರಾಡುವ ಹಂದಿಯಂತೆ ಅವನ ಹಿತನುಡಿಗಳನ್ನು ಇರಿದಾಡುತ್ತ ಹೇಳಿದನು:

'ಅಯ್ಯ, ನಿನ್ನ ಹದಿಬದೆತನದ ಹಿರಿಮೆಯನ್ನು ಶಿಶುಮತಿಗಳಿಗೆ ಹೇಳಯ್ಯ! ನಿನ್ನ ಪತಿವ್ರತಾಸ್ತ್ರೀ ಕಟ್ಟುಕತೆಗಳಲ್ಲಿ ಮಾತ್ರವಲ್ಲದೆ ಇನ್ನೆಲ್ಲಿ ಈ ಪೃಥ್ವಿಯಲ್ಲಿದ್ದಾಳೆ ಹೇಳು. ನನ್ನ ಪ್ರತಾಪಜ್ವಾಲೆಯು ಜಗತ್ರಯಗಳನ್ನು ದಹಿಸಿದೆ. ನನ್ನ ಸಾಹಸದ ಕೈ ಎಲ್ಲವನ್ನೂ ಶೋಧಿಸಿದೆ. ನೀನು ವರ್ಣಿಸುವ ಆ ಶ್ರೇಷ್ಠಳನ್ನು ನಾನು ಇದುವರೆಗೆ ಎಲ್ಲಿಯೂ ಸಂಧಿಸಿಲ್ಲ. ಹಾಗೆ ಕಾಣುವ ಬಯಕೆ ಹಿರಿಬಯಕೆಯಾಗಿಯಷ್ಟೆ ಉಳಿದಿದೆ.

'ಅಯ್ಯಾ ಮಾವಯ್ಯ, ನನ್ನ ಆತ್ಮಚರಿತ್ರೆಯನ್ನು ಹೇಳುವೆ ಕೇಳು. ಹುಟ್ಟುವಾಗಲೇ ನನ್ನ ರಕ್ತದಲ್ಲಿ ಒಂದಾಗಿ ಹೆಣ್ಣಾಸೆ ಸೇರಿ ಬಂದಿದೆ. ಆ ಜನ್ಮ ದೌರ್ಬಲ್ಯವನ್ನು ಜಯಿಸಲು ಎಷ್ಟೆಷ್ಟೋ ನಿಯಮಗಳನ್ನು ಅನುಸರಿಸಿ ಆತ್ಮವನ್ನು ಬೇಯಿಸಿದೆ. ಪತ್ನಿವ್ರತನಾಗಿರಲು ಮುಗ್ಧ ಬುದ್ಧಿಯಲ್ಲಿ ತಾರುಣ್ಯವನ್ನು ಕಳೆದೆ. ನಾನು ಬಯಸಿ ಮೋಹಿಸುವ ಮೊದಲೆ ಹೆಣ್ತನವು ನನ್ನನ್ನು ಬಯಸಿತು. ಅಯ್ಯೋ ಕಾತರಿಸಿ ಮೇಲೆ ಬಿದ್ದಿತು! ತತ್ತರಿಸಿ ಅಂಚಿನಲ್ಲಿ ಓಲಾಡುತ್ತಿದ್ದ ನನ್ನ ಆತ್ಮ ದಡಕ್ಕನೆ ಮನ್ಮಥ ರುಚಿಯ ರಸಾತಳಕ್ಕೆ ಧುಮುಕಿತು!'

'ಅದು ನಿನ್ನ ಮನೋದೌರ್ಬಲ್ಯ.'

'ನೀನು ಏನೇ ಹೇಳು ಮಾವ, ಅಂದಿನಿಂದ ಹೆಣ್ಣುತನದ ಬಗ್ಗೆ ನನಗಿದ್ದ ಪವಿತ್ರತಾ ಭಾವ ಶಿಥಿಲವಾಗಿ ಭೋಗ ಭಾವವೇ ಗಟ್ಟಿಯಾಯಿತು. ನಾನು ಅದರ ಹುಚ್ಚು ಹೊಳೆಯಲ್ಲಿ ಕೊಚ್ಚಿ ಹೋದೆ. ಈ ರಾಕ್ಷಸೇಶ್ವರನ ಮೈಸಿರಿಗೆ, ಐಶ್ವರ್ಯಕ್ಕೆ, ದಿಕ್ಪಾಲಕರನ್ನು ಜಯಿಸಿದ ಹಿರಿಮೆಗೆ, ಸಮಸ್ತ ರಾಜರನ್ನು ಗೆದ್ದ ಕೀರ್ತಿಗೆ; ಈ ನನ್ನ ರಸಿಕತೆ, ಸತ್ತ್ವ, ವೀರ್ಯ, ತೇಜ, ಯೌವನಕ್ಕೆ ವಶವಾಗದಿರುವ ಓರ್ವ ಪವಿತ್ರಾಂಗಿಯನ್ನೂ ನಾನು ನೋಡಿಲ್ಲ. ಹೆಸರಾಂತ ಪತಿವ್ರತೆಯರು ಸುಲಭವಾಗಿ ವಶವಾದ ಮೇಲೆ, ಹದಿಬದೆಯರು ಇರುವರೆಂಬ ನಂಬಿಕೆ ನನ್ನಲ್ಲಿ ಇಲ್ಲವಾಯಿತು.'

ರಾಕ್ಷಸ ಲಕ್ಷಣಗಳ ಹೀನ ನುಡಿ ಕೇಳಿ ಮುನಿವ್ರತಧಾರಿ ಮಾರೀಚನು ಬೆರಗಾದನು. ತನ್ನ ಕಿವಿಗಳನ್ನು ಕೈಯಿಂದ ಮುಚ್ಚಿಕೊಂಡು ಕಣ್ಮುಚ್ಚಿ ಕುಳಿತನು. ಸ್ವಲ್ಪ ಹೊತ್ತು ಮಾತಾಡದೆ ಸುಮ್ಮನಿದ್ದ ರಾವಣ ಅನಂತರ ಉದ್ವೇಗದಿಂದ ಹೀಗೆ ಹೇಳಿದನು:

'ಇಲ್ಲ ಬಿಡು ಮಾರೀಚ, ಎಲ್ಲಿಯೂ ಇಲ್ಲ ಆ ನನ್ನ ತಾಯಿ! ಅಂಥಹ ಪಾವನೆಯನ್ನು ಕಂಡಂದು ನಾನು ಧನ್ಯ! ಕೇಳು, ಒಮ್ಮೆ ಅಂಥ ಪುಣ್ಯ ದೊರೆಯಿತು ಎಂದುಕೊಂಡಿದ್ದೆ. ಆ ಸ್ವಪ್ನವು ಒಡೆದು ಹೋಯಿತು. ನಾನು ವೇದವತಿ ಎಂಬ ಹೆಸರಿನ ಓರ್ವ ಋಷಿ ಪತ್ನಿಯನ್ನು ಬಯಸಿದೆ. ಆ ದೌರ್ಭಾಗ್ಯೆ ನನ್ನ ಸ್ವಭಾವವನ್ನು ತಿಳಿಯದೆ

ಆತ್ಮಹತ್ಯೆ ಬಯಸಿ ಚಿತೆ ಏರಿದಳು. ನಾನೆಂದೂ ಯಾರನ್ನೂ ಬಲಾತ್ಕರಿಸುವುದಿಲ್ಲ. ಆಕೆ ನನಗೆ ವಶವಾಗದೆ ಇದ್ದಿದ್ದರೆ ನಾನೇ ಆಕೆಯ ಪಾದಗಳಿಗೆ ವಂದಿಸುತ್ತಿದ್ದೆ.

'ಮಾವಯ್ಯ, ಇನ್ನೊಂದು ಸಲ ಹದಿಬದೆಯರ ರಾಣಿ ಎಂದುಕೊಳ್ಳುತ್ತಿದ್ದ ಧಾನ್ಯಮಾಲಿನಿಯನ್ನು ಅವಳ ಗಂಡನನ್ನು ಸೋಲಿಸಿ ತಂದೆ. ಆಕೆ ನನಗೆ ಉಪಪತ್ನಿಯಾಗಿದ್ದಾಳೆ! ನನ್ನಲ್ಲಿದ್ದ ಸ್ತ್ರೀ ಗೌರವ ನಿಶ್ಶೇಷವಾಗಿದೆ. ಆ ವಿಷಯಗಳನ್ನು ಬಿಡು. ಈಗ ರಾಮನನ್ನು ನಿಸ್ತೇಜನನ್ನಾಗಿ ಮಾಡಲು ಸೀತೆಯನ್ನು ತರುವೆನು. ಇದು ರಾಜಕೀಯ. ಧರ್ಮದ ವಿಷಯ ಅಲ್ಲ. ಇದಕ್ಕೆ ನೀನು ನೆರವಾಗಬೇಕು. ಇದು ಪ್ರಜೆಯಾದ ನಿನ್ನ ಕರ್ತವ್ಯ. ಇದನ್ನು ಮೀರಿ ನಡೆಯಬೇಡ.'

ಮಾವನೆಂದು ಸಂಬೋಧಿಸುತ್ತಿದ್ದ ರಾವಣನು ಪ್ರಜೆ ಎಂದು ಹೇಳಿ ಎಚ್ಚರಿಸಿದಾಗ ಮಾರೀಚನಿಗೆ ಗರ ಬಡಿದಂತಾಯಿತು. ಮಂತ್ರಿ ಮಾನ್ಯತೆಯ ನಡಾವಳಿಯಿಂದ ದೂರ ಸರಿದ ಅವನ ವರ್ತನೆ ಕಂಡು ಏನು ಹೇಳುವೆ ಹೇಳು ಎಂಬಂತೆ ಅವನತ್ತ ಕತ್ತೆತ್ತಿ, ದೃಷ್ಟಿ ಹರಿಸಿದ.

ಲಂಕೇಶನು ಮಾತು ಮುಂದುವರಿಸುತ್ತ ಆಜ್ಞೆ ಮಾಡಿದ.

'ಬೇಗನೆ ಕನಕ ಜಿಂಕೆಯ ರೂಪ ತಾಳು. ಜನಕಜೆಯ ಮುಂದೆ ಸುಳಿದಾಡಿ ಆಕರ್ಷಿಸು. ನಿನ್ನನ್ನು ಹಿಡಿಯಲು ಬರುವ ರಾಮನನ್ನು ದೂರದೂರಕ್ಕೆ ಸೆಳೆದೊಯ್ಯಿ. ದೀನರವದಿಂದ ಲಕ್ಷ್ಮಣನನ್ನು ಕೂಗು. ಗಾಬರಿಯಿಂದ ಲಕ್ಷ್ಮಣನು ರಾಮನಿರುವ ಕಡೆಗೆ ಓಡಲು – ನಾನು ಸೀತೆಯನ್ನು ಕದ್ದು ಎತ್ತಿಕೊಂಡು ಹೋಗುತ್ತೇನೆ. ಈ ನಿನ್ನ ಕರ್ತವ್ಯವನ್ನು ವ್ಯರ್ಥವೆಂದು ತಿಳಿಯಬೇಡ. ನಿನಗೆ ಖರನ ರಾಜ್ಯವನ್ನು ಕೊಟ್ಟು ಅಭಿಷೇಕ ಮಾಡುತ್ತೇನೆ.'

'ರಾಜನೇ, ಯಾವಾಗಲೂ ನಿನ್ನ ಆಸೆಯೇ ನಿನಗೆ ಮತಿಯಾಗಿ ದುಷ್ಟಕಾಮನೆಗೆ ತಕ್ಕ ತರ್ಕವನ್ನು ಸೃಷ್ಟಿಸುವೆ. ನನ್ನ ಹಿತವಚನವನ್ನು ಕೇಳು. ತಲೆ ಬಲಿತಿದೆಯೆಂದು ಬಂಡೆಗೆ ಡಿಕ್ಕಿ ಹೊಡೆಯುವಂತೆ – ರಾಮನ ಸತಿಯ ಶಾಪಕ್ಕೆ, ಕೋದಂಡಧರ ರಾಮನ ಕೋಪಕ್ಕೆ ಬಲಿಯಾಗಬೇಡ.

'ಎಲವೋ ಲಂಕೇಶ, ಲಂಕೆಯ ವಿನಾಶಕ್ಕೆ ಮೊದಲ ಕಿಡಿ ಯಿಡಬೇಡ! ರಾಮಬಾಣಕ್ಕೆ ಸಿಕ್ಕಿ ಮಡಿಯಲು ನನಗೆ ಆಸೆಯಿಲ್ಲ. ರಕ್ಕಸ ಕುಲದ ನಾಶಕ್ಕೆ ನೆರವಾಗಲಾರೆ. ನಿನ್ನ ಪಟ್ಟಾಭಿಷೇಕಕ್ಕೆ ದೂರದಿಂದಲೇ ಕೈ ಮುಗಿಯುವೆ. ನಿನ್ನ ಕೃಪೆ ಬೇಡ!'

ರಾಕ್ಷಸೇಶ್ವರನ ಮುಖವು ಕೋಪಾಗ್ನಿ ಜ್ವಾಲೆಯಿಂದ ವಿಕಾರವಾಗಿ ಭಯಂಕರವಾಯಿತು. ಘಟಸರ್ಪದಂತೆ ಫೂತ್ಕರಿಸುತ್ತ,

'ರಾಮ ಬಾಣದಿಂದ ಬದುಕುವ ದೂರದಾಸೆಯಿರಬಹುದು ಆದರೆ ನನ್ನ ಆಜ್ಞೆಯನ್ನು ಪಾಲಿಸದಿದ್ದರೆ ನಿನ್ನ ಜೀವದಾಸೆಯನ್ನು ಬಿಟ್ಟುಬಿಡು.' ಎಂದು ಹೇಳುತ್ತ ಉರಿದೆದ್ದು ಎಲೆಮನೆಯಿಂದ ಮಾರೀಚನ ಉಸಿರೆ ದೂರಕ್ಕೆ ಓಡಿ ಹೋಗುವಂತೆ ಹೊರಗೆ ಹೋದನು.

ಮಾರೀಚನು ತನ್ನ ಹೋದ ಉಸಿರನ್ನು ಹಿಂದಕ್ಕೆ ತರುವಂತೆ ದಿಗ್ಗನೆ ಎದ್ದು ಓಡಿದನು. ಚಕ್ರವರ್ತಿಯ ಕೈಯನ್ನು ಹಿಡಿದು ಬೇಡಿಕೊಂಡನು:

'ಕೈಯನ್ನೇ ಕಾಲೆಂದು ತಿಳಿಯಯ್ಯ. ನನ್ನ ಎಲೆಮನೆಯೊಳಕ್ಕೆ ಬಾರಯ್ಯ, ನಿನ್ನಾಜ್ಞೆಯನ್ನು ಪಾಲಿಸುತ್ತೇನೆ. ನನಗೆ ಎಂತಿದ್ದರೂ ಮರಣ ಖಂಡಿತ. ನೀನೋ ರಾಮನೋ ಎಂದಾಗ ಸಂಹಾರಗೊಳ್ಳಲು ನನ್ನ ಆಯ್ಕೆ ರಾಮಬಾಣ. ನೀನು ಹೇಳಿದಂತೆ ಮಾಡಿದರೆ ಇಬ್ಬರಿಗೂ ಒಳ್ಳೆಯದಾಗುತ್ತದೆ. ನನ್ನ ಸಾವು ತಾಯಿಯ ಋಣವನ್ನು, ಅರಸನ ಆಜ್ಞೆಯನ್ನು ತೀರಿಸಿದಂತಾಗುತ್ತದೆ. ನಿನ್ನಿಂದ ನನಗೆ ಮುಕ್ತಿ; ನನ್ನ ಸಾವು ನಿನ್ನ ಆತ್ಮದುದ್ಧಾರಕ್ಕೆ ಮೊಟ್ಟ ಮೊದಲ ಯಜ್ಞಾಹುತಿ.'

ಲಂಕೇಶ್ವರನು ತನ್ನ ಕರ್ಮಕ್ಷಯ ಕಾರಣವನ್ನು ಅಪ್ಪುವಂತೆ ಮಾಯಾ ನಿಪುಣನು, ಕಾಮರೂಪಿಯು ಆದ ಮಾವ ಮಾರೀಚನನ್ನು ಅಪ್ಪಿಕೊಂಡನು. ಮೃತ್ಯುರಥಕ್ಕೆ ಒಯ್ಯುವಂತೆ ಪುಷ್ಪಕವಿಮಾನದತ್ತ ಕರೆದುಕೊಂಡು ಹೋದನು. ವಿಮಾನ ಶ್ರೀರಾಮನ ಆಶ್ರಮದ ಕಡೆಗೆ ಹಾರಿತು.



5

# ಮಂಡೋದರಿ

ರಾವಣನ ರಾಣಿ ಮಂಡೋದರಿಯು ಪುಷ್ಪಕ ವಿಮಾನದಲ್ಲಿ ತನ್ನ ಪತಿಯೊಡನೆ ವೇಲಾದ್ರಿ ಪರ್ವತದ ತಪ್ಪಲು ಪ್ರದೇಶದಲ್ಲಿ ವಿಹಾರಾರ್ಥವಾಗಿ ಹೋಗಲು ಉಲ್ಲಾಸದಿಂದಿದ್ದಳು. ಆ ಮಧುರ ಭಾವದ ಮನೋಹರಿ ಸತಿಯ ಮೈಯ ಮೋಹದ ಸರಸ್ಸಿನಲ್ಲಿ ಲಂಕೇಶ್ವರ ವಿಹರಿಸಿ, ದಡಕ್ಕೇರಿದ ಮದಗಜದಂತೆ ಕಿರುನಗೆ ಸೂಸಿದನು. ಮೀಸೆ ತಿರುವುತ್ತ, ಮೆಲ್ಲುತ್ತಿದ್ದ ತಾಂಬೂಲವು ಅವನ ಹೃದಯದ ರಾಗರತಿ ತುಟಿಗೆ ಹೊಮ್ಮಿದಂತೆ ಕೆಂಪಾಗಿಸಿತು. ಆಗ ನಲ್ಲೆಯನ್ನು ನೋಡುತ್ತ ಹೇಳಿದನು:

'ಪ್ರಿಯೆ, ನಾಳೆ ಒಂದು ಮಹತ್ತರ ಕಾರ್ಯದಿಂದ ಅನಿವಾರ್ಯವಾಗಿ ದೂರಕ್ಕೆ ಪ್ರಯಾಣ ಹೋಗಬೇಕಾಗಿದೆ. ನಾಳೆಯ ಔತಣಕೂಟವನ್ನು ಮುಂದಕ್ಕೆ ಹಾಕು.'

'ಅದೇನು ಅಂತಹ ರಾಜಕಾರ್ಯ?'

'ನಿನಗೇತಕ್ಕೆ ರಾಜಕಾರಣ? ಆ ಬರಿ ಗಂಡು ಹಗರಣ.'

ಎಂದು ಹಾಸ್ಯವಾಗಿ ಹೇಳಿದವನ ಸುಖ ಮುದ್ರಿತ ಮುಖದಲ್ಲಿ ವಿಕೃತ ಭಾವದ ಛಾಯೆ ಸುಳಿದುದನ್ನು ಗಮನಿಸಿದ ಮಂಡೋದರಿ ಕೇಳಿದಳು:

'ದೈತ್ಯೇಂದ್ರನೇ, ನಮ್ಮ ಔತಣಕ್ಕೂ ಮಿಗಿಲಾದ ಆ ರಾಜಕಾರ್ಯವೇನು? ಜಗತ್ತನ್ನು ಜಯಿಸಿದವನಿಗೆ ಇಂದ್ರನ ಉದ್ಧಟತನವೆ? ಕುಬೇರನ ಅವಿನಯವೆ? ಯಮನ ಗರ್ವವೆ? ಅಥವಾ ಮರ್ತ್ಯರಾಜರ ಅವಿಧೇಯತೆಯೆ?'

'ಹಿರಿಯರಿಗೆ ಹಿರಿಯ ಕೋಟಲೆ ಹಿರಿದಾದುದಲ್ಲ. ಕಿರಿಯರ ಕಿರುಕುಳವೆ ಹಿರಿದು. ಮೃಗರಾಜನಿಗೆ ಮದಗಜದ ದಂತ ಲೆಕ್ಕವೆ? ನೊರಜು ನುಸಿಗಳ ಕಿರಿಕಿರಿಗೆ ರೋಸಿ ಹೋಗುವುದಿಲ್ಲವೆ? ಆ ದಶರಥನ ಮಗ ರಾಮನೆಂಬುವವನು ನಮ್ಮ ದಂಡಕಾರಣ್ಯದ ಜನಸ್ಥಾನವನ್ನು ನಿರ್ಜನವಾಗಿಸಿದ್ದಾನೆ ಎಂಬ ವಾರ್ತೆ ಬಂದಿದೆ. ನನ್ನ ಯಮರೂಪಿ ಸಹೋದರರಾದ ಖರದೂಷಣರು ಕದನದಲ್ಲಿ ಮಡಿದಿದ್ದಾರೆ. ತಂಗಿ ಚಂದ್ರನಖಿಗೆ ಅವಮಾನವಾಗಿದೆ! ತಂಗಿಯನ್ನು ಅವಮಾನಪಡಿಸಿದವನ ಅರ್ಧಾಂಗಿಯನ್ನು ಪ್ರತಿಯಾಗಿ ಅವಮಾನಿಸದೆ ಬಿಡಲಾಗುತ್ತದೆಯೆ? ತಮ್ಮಂದಿರನ್ನು ಕೊಂದ ಆ ಮನುಜರನ್ನು ಕೊಂದು ತಿನ್ನದಿರುತ್ತದೆಯೆ ರಾಕ್ಷಸ ವೈರ್ಯ? ಆ ಜನಕನ ಮಗಳನ್ನು, ನೆಲತಾಯಿಯ ಮಗಳೆಂದು ಹೆಸರಾದ ಸೀತೆಯನ್ನು ತಂದು ನಿನಗೆ ದಾಸಿಯಾಗಿಸುತ್ತೇನೆ!

'ಆ ಪತಿವ್ರತೆ ನನಗೆ ದಾಸಿಯಾಗುವುದು ಬೇಡ.'

'ಓಹ್ ನನ್ನ ಜೀವಿತೇಶ್ವರಿ, ಸ್ವಯಂವರದ ಕಹಿಕಥೆ ನೆನಪಿದೆಯೆ? ಹರನ ಕೋದಂಡವನ್ನು ಮುರಿಯಲು ಮತ್ತೆ ಬರುವೆನೆಂದು ಬಂದೆ. ಉಗ್ರ ತಪಸ್ಸಿನಿಂದ ರುದ್ರನನ್ನು ಒಲಿಸಿಕೊಂಡೆ. ಕೋದಂಡವನ್ನು ತುಂಡಾಗಿಸುವ ಶಕ್ತಿಯ ವರಗಳನ್ನು ಪಡೆದೆ. ಮಿಥಿಳೆಗೆ ಹೋಗುವಷ್ಟರಲ್ಲಿ ರಾಜರ್ಷಿ ಜನಕನು ಸೀತೆಯನ್ನು ರಾಮನಿಗೆ ಧಾರೆಯೆರೆದ ಸುದ್ದಿ ಬಂದಿತು. ಆರ್ಯರಿಗೂ ನಮಗೂ ಕೊಳುಕೊಡೆಯ ನಂಟು ಅಸಹ್ಯವಂತೆ! ನಾವು ರಾಕ್ಷಸರಂತೆ.'

'ಬಿಡಿ, ಆ ಮಾತುಗಳೇಕೆ?'

'ನಿನಗೆ ಗೊತ್ತಿಲ್ಲ ಅವರು ನಮ್ಮನ್ನು ಹೇಗೆ ವರ್ಣಿಸುವರೆಂದು. ದಶಶಿರ ಎಂಬುದು ನನ್ನ ಬಿರುದು. ಅದನ್ನು ಅವರು ಹತ್ತು ತಲೆಯೆಂದು ಚಿತ್ರಿಸುತ್ತಾರೆ! ದಶರಥನನ್ನು ನಾವು ಹಾಗೆ ಚಿತ್ರಿಸುತ್ತೇವೆಯೆ? ಹತ್ತು ರಥಗಳಲ್ಲಿ ಇಪ್ಪತ್ತು ಕಾಲುಗಳಿಟ್ಟು ಬರುವನೆಂದು ವರ್ಣಿಸುತ್ತೇವೆಯೆ? ನಮ್ಮ ಹೆಣ್ಣು ಮಕ್ಕಳನ್ನು ಅವರು ಕೋರೆ ಹಲ್ಲು, ಕೋಡುಗಳಿಂದ ಚಿತ್ರಿಸುತ್ತಾರಂತೆ! ನಾವು ನರಮನುಷ್ಯರ ಬಿಸಿರಕ್ತವನ್ನು ಕುಡಿದು ಬದುಕುವವರಂತೆ! ನಮ್ಮಲ್ಲಿ ಸಂಸ್ಕೃತಿ ಸಾಸಿವೆಯಷ್ಟು ಇಲ್ಲವಂತೆ! ರಾಕ್ಷಸ ಕುಲದ ನಾವು ನಿಜವಾಗಿ ರಾಕ್ಷಸರಂತೆ! ಸೂರ್ಯ ಕುಲದವರು ರವಿಯಂತೆ ದುಂಡಗೆ ಬಿಸಿಯಾಗಿರುವರೆಂದು ನಾವು ಆಡಿಕೊಳ್ಳುತ್ತೇವೆಯೆ?'

'ಪತಿದೇವನೆ, ಆ ವ್ಯರ್ಥ ವಿವರಗಳೇಕೆ ಬಿಡಿ.'

'ಮಂಡೋದರಿ, ನೀನು ಅಂತಃಪುರದಲ್ಲಿರುವವಳು. ಹೊರಗಿನ ಸತ್ಯ ತಿಳಿ. ನಮ್ಮ ಮಾತು ಹಾಗಿರಲಿ; ಧ್ವಜದಲ್ಲಿ ಕಪಿಗಳನ್ನು ಹೊಂದಿರುವ ವಾನರರೆಲ್ಲರೂ ಕೋತಿಗಳಂತೆ! ಅವರಿಗೆ ನಮ್ಮ ಸಂಸ್ಕೃತಿಯ ರುಚಿಯನ್ನು ತೋರಿಸುತ್ತೇನೆ! ಸೀತೆಗಾಗಿಯೆ ನಾನು ತಪದಿಂದ ಎಷ್ಟೋ ಶಕ್ತಿಯನ್ನು ಪಡೆದಿದ್ದೇನೆ. ಅವೆಲ್ಲವೂ ಸೀತೆಗಾಗಿ ವ್ಯಯವಾಗಲಿ!'

ಎಂದು ಮಾತ್ಸರ್ಯದ ಕಿಚ್ಚಿನಿಂದ ಕೆಚ್ಚು ನುಡಿಗಳನ್ನು ಆಡುತ್ತಿದ್ದ ಪತಿಯನ್ನು ನೋಡುತ್ತ, ಮಂಡೋದರಿಯು ಕಣ್ಣೀರನ್ನು ಮಿಡಿಯುತ್ತ ನಿಟ್ಟುಸಿರುಬಿಟ್ಟಳು. ಪತಿಗೆ ತನ್ನ ಹೃದಯ ವೇದನೆಯನ್ನು ಹೇಳಲಾರದೆ ಮನೆಯ ದೇಗುಲದತ್ತ ಸಾಗಿದಳು!

* * *

ರಾವಣನು ಸೀತೆಯನ್ನು ಅಪಹರಿಸಿಕೊಂಡು ಬಂದಿರುವ ಸುದ್ದಿಯ ಭೂತವು ಲಂಕಾ ಜನರ ಕಿವಿಯಿಂದ ಕಿವಿಗೆ ಸುಯ್ಲಾಳಿಯಾಗಿ ಸುಳಿಯಿತು. ಅದು ತರತರದ ಭಾವನೆಗಳ ಉಸಿರಿನಿಂದ ಕಡಲನ್ನು ಮಥಿಸುತ್ತ ಸಾಗಿ ಮಯನಂದನೆ ಮಂಡೋದರಿಯ ದೇವಮಂದಿರವನ್ನು ತಲುಪಿತು. ಅದರ ಭೀಕರ ಆಕಾರವನ್ನು ಕಂಡೊಡನೆಯೆ ಇಂದ್ರಜಿತುವಿನ ತಾಯಿ ಬೆಚ್ಚಿದಳು. ತನ್ನ ದೇವರ ಪೂಜಾ ವ್ರತವು ಪೊಳ್ಳಾಯಿತೆ ಎಂದುಕೊಂಡಳು. ಆಗ ಭೂತವು,

'ತಾಯಿಯೇ ಬೆಚ್ಚದಿರು. ನನ್ನ ಈ ವಿಕೃತ ಆಕಾರವನ್ನು ನೋಡಿ ಬೆಚ್ಚದಿರು. ಹಿತವೆಂಬುದು ಎಷ್ಟೋ ಸಲ ನನ್ನಂತೆ ಅಪ್ರಿಯವಾದ ಆಕೃತಿ ಪಡೆದು ಬರುತ್ತದೆ. ಶಿವನ ಕೃಪೆಗೆ ನಾನಾ ಮುಖಗಳಿವೆ. ಸುಖದಂತೆ ದುಃಖವು ಸತ್‌ಶಕ್ತಿಯ ಕೃಪೆಯೆಂಬ ನರಸಿಂಹನ ಉಗುರು. ವಿಧಿಯ ಕರುಣೆಯು ನಿನ್ನ ಪತಿಯ ಅಭ್ಯುದಯಕ್ಕೆ ಏಣಿಯನ್ನು ಒಡ್ಡಿದೆ. ಸೀತಾಪಹರಣವೆ ಅದರ ಮೊದಲ ಮೆಟ್ಟಿಲು. ಶ್ರೀರಾಮನ ಅರ್ಧಾಂಗಿಯ ಜೊತೆ ನೀನು ಮನದುಂಬಿ ಪ್ರಾರ್ಥಿಸಿದರೆ ರಾವಣನ ಉದ್ಧಾರದ ಸತ್ಫಲವು ದೊರಕುತ್ತದೆ.'

ಎಂದು ಹೇಳಿತು. ಮಂಡೋದರಿಯ ಮನವನ್ನು ಆಕ್ರಮಿಸಿದ್ದ ಅತಿ ಚಿಂತೆ ದೂರವಾದಂತೆ ಮಾಯವಾಯಿತು.

ಅವಳು ಸೀತೆಯನ್ನು ಕಾಣುವ ಕಾತುರತೆಯಿಂದ ಪೂಜೆಯಿಂದ ಏಳುತ್ತಿದ್ದಳು. ಆಗ ಪತಿಯ ಮೂರ್ತಿಯು ಶಿವ ಮಂದಿರವನ್ನು ಪ್ರವೇಶಿಸಿತು. ಹೊಸಿಲು ದಾಟಿ ಒಳಬಂದ ಅವನು ನಿಂತನು. ಅಲ್ಲಿಯ ಹೂ, ಹಣ್ಣು, ಪರಿಮಳ ದ್ರವ್ಯಗಳ ಭವ್ಯತೆಯತ್ತ, ಕಣ್ಣಾಡಿಸಿದನು. ಮೌನದಿಂದ ಅದರ ಶಾಂತಿಯಲ್ಲಿ ಒಂದಾದನು. ಆ ದಂಪತಿಗಳು ಪರಸ್ಪರರ ಉಸಿರಾಟದ ಸದ್ದನ್ನು ಆಲಿಸಿದರು. ಮೆಲ್ಲಮೆಲ್ಲನೆ ದೈತ್ಯೇಂದ್ರನ ಹಣೆ ಬಾಗಿತು. ಮನ್ಮಥನ ಬಂಧನದಲ್ಲಿದ್ದ ಅವನು ಮನ್ಮಥನ ಶತ್ರುವಾದ ಶಿವನಿಗೆ ಕೈ ಮುಗಿದನು!

ಉದ್ವೇಗವನ್ನು ತಡೆಯಲಾರದೆ ಕುಗ್ಗಿ ಕುಸಿದಂತಿದ್ದ ದೀನ ದುಃಖದ ಸತಿಯ ಬಳಿಗೆ ಹೋದನು. ಅವಳು ತಲೆ ಎತ್ತಲಿಲ್ಲ. ಅವಳ ತೊಟ್ಟಿಟ್ಟ ಕಂಬನಿಯಿಂದ ನೆಲ ತೋಯ್ದಿತ್ತು. ಅದನ್ನು ನೋಡಿದ ರಾವಣ ಹನಿಗಣ್ಣಿನವನಾಗಿ ನಿಟ್ಟುಸಿರು ಬಿಡುತ್ತ ಕೇಳಿದನು:

'ದೇವಿ ನಿನಗೇನು ಕೊರತೆ? ನಿನ್ನ ಬಿಸಿಗಣ್ಣೀರಿನಿಂದ ಭೂ ದೇವಿ ಬೆಂದು ಹೋಗುತ್ತಾಳೆ.'

ಓಲೆ ಭಾಗ್ಯವೇ ನಡುಗುವಂತೆ ಭಾವೋದ್ವಿಗ್ನೆಯಾದ ಮಂಡೋದರಿಯ ವಜ್ರದೋಲೆಯು ಥರಥರ ನಡುಗುತ್ತಿರಲು ಉತ್ತರಿಸಿದಳು:

'ಜೀವೇಶನೇ, ಸತಿಗೆ ಪತಿ ಹೃದಯವನ್ನು ಪಡೆಯುವುದಲ್ಲದೆ ಬೇರೆ ಕೊರತೆ ಯಾವುದಿದೆ?'

'ಸೋಜಿಗದ ಬಯಕೆ!'

'ತನ್ನ ಹೊಟ್ಟೆಯಲ್ಲಿ ಹುಟ್ಟಿದವಳ ಕಣ್ಣಿನ ಹನಿ ಕಿಡಿಗೆ ಭೂಮಿತಾಯಿ ಬೆಂದು ಮರಗಟ್ಟಿದ್ದಾಳೆ. ನನ್ನ ಕಂಬನಿಯ ಬಿಸುಪನ್ನು ಅವಳು ಹೇಗೆ ತಿಳಿಯುತ್ತಾಳೆ?'

'ನಾನು ಯಾವಾಗಲೂ ನಿನ್ನವನೆ'

'ಅಯ್ಯೊ ಆ ಪುಣ್ಯವೆಂದಿಗೊ!'

'ಮತ್ತೆ ಮತ್ತೆ ಅದೆ ಕೊರತೆ! ರಾಣಿಯೇ, ಗ್ರಹದ ನಿಷ್ಠೆಯನ್ನೇಕೆ ರವಿ ನಿಷ್ಠೆಗೆ ಹೋಲಿಸುವೆ? ನಿನಗೆ ಈ ರಾವಣನ ಒಲ್ಮೆ ಸಂಪೂರ್ಣವಾಗಿದೆ. ಹಂಚಿಕೆಗೊಂಡುದರಿಂದ ಅದಕ್ಕೆ ಕೊರೆಯಾಗಿಲ್ಲ. ಅದನ್ನು ದೋಷವೆಂದೆಣಿಸಬೇಡ.'

ಆ ನುಡಿ ಕಿವಿಗೆ ಬೀಳುತ್ತಿದ್ದಂತೆ ರಾಣಿಯು ಹಾವು ಹೆಡೆಯೆತ್ತುವಂತೆ ತಲೆಯೆತ್ತಿದ್ದಳು. ಕಣ್ಣಿಗೆ ಕಣ್ಣು ಬೆಸೆದು ನೋಡುತ್ತ ಕೇಳಿದಳು:

'ಓ ಬುದ್ಧಿವಂತ ಪತಿಯೆ, ಉಸಿರುಸಿರಿನಲ್ಲಿ ಬೆಸೆದುಕೊಂಡು ಒಲಿದ ಎದೆಗಳನ್ನು ಕಿತ್ತು ಎಳೆದು ತಂದು ಹೀಗೆ ಚಮತ್ಕಾರವಾಗಿ ಹರಟುವುದೆ? ಪತಿವ್ರತೆಯ ಹೃದಯದ ಉರಿ ಲಂಕೆಯನ್ನು ದಹಿಸುವುದಿಲ್ಲವೆ? ಮೃತ್ಯುವು ಕುಲಕ್ಷಯಕ್ಕೆ ಕೂಳಿ (ಮೀನು ಹಿಡಿಯುವ ಬುಟ್ಟಿ)ಯನ್ನು ಒಡ್ಡಿದೆ!...

'ಪ್ರಾಣೇಶ ದೈತ್ಯೇಂದ್ರನೆ, ನಿನ್ನ ರೀತಿಯ ಇನ್ನೋರ್ವ ರಾವಣನು ಇದ್ದಿದ್ದರೆ – ಈ ಅಬಲೆ ಮಯನ ಮಗಳು ನಿನಗೆ ಪತಿವ್ರತೆಯರು ಇರುವುದನ್ನು ಪತಿವ್ರತೆತನದ ಹಿರಿಮೆಯನ್ನು ತೋರುತ್ತಿದ್ದಳು.'

ಎಂದು ಹೇಳಿ ಅವಳು ನೋಡಿದ ಆ ದಿಟ್ಟ ನೋಟಕ್ಕೆ, ಆ ದನಿಯ ದಾರ್ಢ್ಯಕ್ಕೆ, ಆ ಧರ್ಮಧೈರ್ಯಕ್ಕೆ ದನುಜನ ಎದೆ ಅಳುಕಿ ಧಿಗಿಲುಗೊಂಡಿತು. ಶಿವನ ಸನ್ನಿಧಿಯ ಮಹಿಮೆ ಮಂಗಳವನ್ನು ಪ್ರಚೋದಿಸಿತು ಎಂಬಂತೆ ಅವನು ಹೇಳಿದನು:

'ದೇವಿ, ಕರುಣಿಸು. ನಿನ್ನ ದಿಟ್ಟಿ ಸಿಡಿಲನ್ನು ಉಪಸಂಹರಿಸು. ರಾವಣನಿಗೆ ಜಗತ್ಪಾಲ ದಿಕ್‌ಪಾಲಕರ ಆಟಾಟೋಪದ ಕೋಪ ಹುಲ್ಲು ಕಡ್ಡಿಗೆ ಸಮವೆಂಬುದು ದಿಟ. ಆದರೆ ನಿನ್ನ ಒಲ್ಮೆ ಹುಬ್ಬುಗಂಟಿಕ್ಕಿದರೆ ನಾನು ಧೈರ್ಯಚ್ಯುತನು, ಪರದೇಶಿಯು, ಶೂನ್ಯಚಿತ್ತನು ಆಗುತ್ತೇನೆ! ನೀನು ನನಗೆ ಶಾಂತಿ, ಸತ್ವ, ಆತ್ಮ. ನೀನು ನನಗೆ ತುತ್ತತುದಿಯ ಆಸೆ, ನೆಲೆ, ನೆಚ್ಚು, ಪುಣ್ಯ! ದೇವರೇ ಹೇಸಿ ತ್ಯಜಿಸಿದರೂ ನಾನೇನೂ ಕೆಡುವುದಿಲ್ಲ. ಪ್ರೇಮಮಯಿಯಾದ ನೀನು ತೊರೆದರೆ ನಾನು ಶೂನ್ಯ. ಈ ದೌರ್ಬಲ್ಯವನ್ನು ನಾನು ಅರಿತಿರುವೆ. ಲೋಕವನ್ನು ಜಯಿಸಿದ ನಾನು ಇತರರಂತೆ ನನ್ನ ಇಂದ್ರಿಯಗಳಿಗೆ ದಾಸನೆಂಬುದನ್ನು ಬಲ್ಲೆ.

'ಓ ನಲ್ಲೆ, ಕೇಳಿಸಿಕೊ. ನಿನ್ನ ಮುಂದೆ ಅಲ್ಲದೆ ಅನ್ಯರ ಮುಂದೆ ತಪ್ಪನ್ನು ಒಪ್ಪಿಕೊಂಡರೆ ಅದು ದೊರೆತನಕ್ಕೆ ಕುಂದು. ಹಿರಿಮೆಗೆ ಅಗೌರವ. ದೇವಿ, ನಿನ್ನ ಒಂದು ಗೌರವಕ್ಕೆ ಅವಮಾನವೆಂದು ನನ್ನ ಆತ್ಮದ ಒಳತೋಟಿಯನ್ನು ಇತರ ಕ್ಷುದ್ರರಿಗೆ, ನಾಯಿಯಂತಹವರಿಗೆ ತಿಳಿಸದೆ ಅಡಗಿಸಿಟ್ಟುಕೊಂಡಿದ್ದೇನೆ.

'ನಾನು ಹೇಳುವುದನ್ನು ಆಲಿಸು. ಸೀತೆಯನ್ನು ತಂದಂದಿನಿಂದ ಮನಸ್ಸಿನಲ್ಲಿ ಏನೊ ಕಳವಳ. ಹೆದರಿಕೆಯನ್ನು ನಾನು ಅರಿಯೆ. ಆದರೂ ಮನಸ್ಸಿಗೇನೋ ಅಶಾಂತಿ. ಒಮ್ಮೊಮ್ಮೆ ಇಂದ್ರಿಯದಾಹ ಕೆರಳಿ ಕಾತರಿಸುತ್ತದೆ. ಮತ್ತೆ ಒಮ್ಮೊಮ್ಮೆ ನಿನ್ನ ಒಂದು ತಪದ ಫಲ ಎನ್ನುವಂತೆ ಅಪೇಕ್ಷೆಯ ಮನ್ಮಥನ ರಥದ ತೇರಿನ ಗಾಲಿಯನ್ನು ಮಂಗಳವು ಬಿರಿಯೆತ್ತಿ (Brake ಹಾಕಿ) ತಡೆಯುತ್ತದೆ.'

ಎಂದು ಹೇಳುತ್ತ ಮನದ ಭಾವದುಯ್ಯಾಲೆಯಲ್ಲಿ ತೂಗುತ್ತ ಮತ್ತೆ ಏನು ನುಡಿಯಬೇಕೆಂಬ ಆಲೋಚನೆ ಹೊಮ್ಮದೆ ಮೌನದಿಂದ ಬಾಗಿ ನಿಂತನು. ಅವನನ್ನು ಕರುಣೆ, ಪ್ರೀತಿ, ಪ್ರಾರ್ಥನಾಮಯ ನಯನದಿಂದ ನೋಡುತ್ತ ಮಯನ ಮಗಳು ತನ್ನ ಒಳಭಾವವನ್ನು ಹೊರಹಾಕಿದಳು:

'ಜಾನಕಿಯೆಲ್ಲಿ? ನಾನು ಆಕೆಯನ್ನು ನೋಡುತ್ತೇನೆ.'

ಅಸುರನು ಆ ಮಾತಿಗೆ ಬೆಚ್ಚಿ ನುಡಿದನು:

'ಅದಾಗದು!'

'ಏಕೆ?'

ಆ ಪ್ರಶ್ನೆಗೆ ಇಂದ್ರಜಿತುವಿನ ತಂದೆ ಮಂದಸ್ಮಿತನಾಗಿ ಉತ್ತರಿಸಿದನು:

'ನಿನ್ನ ದರ್ಶನದಿಂದ ಜಾರಿಣಿಗೆ ಮಹಾಪತಿವ್ರತೆಯ ದೃಢತೆ ಒದಗುತ್ತದೆ! ಇನ್ನು ಸೀತೆಯ ಮಾತೇನು?'

'ಸೀತೆಯನ್ನು ಉಪಚರಿಸುವವರು ಯಾರು?'

'ಅದಕ್ಕೆ ತಂಗಿ ಇರುವಳು.'

ಆ ಮಾತಿನಿಂದ ಮಂಡೋದರಿಯ ಮುಖ ಗಂಟಿಕ್ಕಿತು. ನಿಟ್ಟುಸಿರು ಬಿಡುತ್ತ ಹೇಳಿದಳು:

'ಸೊಸೆಯನ್ನಾದರೂ ಅದಕ್ಕೆ ನೇಮಿಸಿದ್ದರೆ...'

'ಏನು ಹೇಳಿದೆ? ತಾರಾಕ್ಷಿಯನ್ನೆ? ಅವಳು ಇಂದ್ರಜಿತುವಿನ ಪತ್ನಿ ಎಂಬುದನ್ನು ಮರೆತೆಯೇನು?'

'ಸೀತೆಯೂ ಭೂಜಾತೆ; ರಾಮನ ಪತ್ನಿ!'

ಅಸುರನು ಅನಿಷ್ಟವನ್ನು ಕೇಳಿದಂತೆ ಅಸಮಾಧಾನದಿಂದ ಕೋಪಗೊಂಡು ರೇಗುತ್ತ ಹೇಳಿದನು:

'ನನ್ನಿಂದ ಕದ್ದೊಯ್ದವಳನ್ನು ಮತ್ತೆ ನಾನು ಗೆದ್ದು ತಂದಿದ್ದೇನೆ!'

'ಹೆಣ್ಣಿನ ಶರೀರ ಅಲ್ಲ, ಮನಸ್ಸು ಮುಖ್ಯ!'

'ಶರೀರದ ಅಂಶವೇ ಹೃದಯ! ಅದನ್ನು ಅನುಸರಿಸಿ ಮನಸ್ಸು ಇಂದಲ್ಲ ನಾಳೆ ಸೋಲುವುದು!'

'ಅಸುರೇಂದ್ರನೇ ಕೇಳು. ಶಿವ ಕೃಪೆಯಿಂದ ನಿನ್ನ ಈ ಭ್ರಾಂತಿಯನ್ನು ಸೀತೆ ಹುಸಿಯಾಗಿಸುತ್ತಾಳೆ!'

'ನನ್ನ ಇಚ್ಛೆ ಸೋಲಲಿ. ಹದಿಬದೆಗೆಲ್ಲಲಿ. ನಿನ್ನಾಸೆಯು ಸಲ್ಲಲಿ. ಆದರೆ ಅಭ್ಯುದಯಕ್ಕಾದರೂ ಬಲದಿಂದಲ್ಲದೆ ನಾನು ಸೋಲೆನು.'

ಎಂದು ಹೇಳಿ ರಾಜನು ಓಡುತ್ತಿರಲು, ರಾಣಿಯು ದೀನವಾಣಿಯಿಂದ ಕರೆದಳು. ಪ್ರಸಾದವನ್ನು ನೀಡಿದಳು. ಕೈ ಮುಗಿದಳು. ಅದನ್ನು ಹಣೆಗೆ ಒತ್ತಿಕೊಳ್ಳುತ್ತ ಹೇಳಿದನು:

'ದೇವಿ, ನೀನು ಮಹಿಮಳು. ನಾನು ಅಲ್ಪ. ನಿನ್ನ ಒಳ್ಳೆಯತನ ನನ್ನನ್ನು ಶಿಕ್ಷಿಸಲಿ, ರಕ್ಷಿಸಲಿ. ನಾನು ಆಗ ಧನ್ಯ! ದೇವರಿಗೆ ನಾನು ಕೈ ಮುಗಿಯಬೇಕೆಂದು ಆಸೆಯೆ? ಎಲ್ಲರಿಂದ ಕೈ ಮುಗಿಸಿಕೊಳ್ಳುವ ನನಗೆ, ನನ್ನಿಂದ ಕೈ ಮುಗಿಸಿಕೊಳ್ಳುವವನು ಒಬ್ಬನಾದರೂ ಇದ್ದರೆ ಒಳ್ಳೆಯದಲ್ಲವೆ!' ಎಂದು ಅರ್ಧ ಹಾಸ್ಯಭಾವವನ್ನು ವ್ಯಕ್ತಿಪಡಿಸಿದರೂ, ಗಂಭೀರವದನನಾಗಿ ಚಂದ್ರಚೂಡನಿಗೆ ದಿಂಡಿರುಳಿದನು. ಜಗತ್ತನ್ನು ಜಯಿಸಿದ ದೈತ್ಯ ಚಕ್ರೇಶ್ವರನು ಹಾಗೆ ಅಲ್ಲಿ ಸಾಷ್ಟಾಂಗದಿಂದ ನಮಸ್ಕರಿಸಿದ ದೃಶ್ಯವನ್ನು ಕಂಡು ಮಂಡೋದರಿಗೆ ಮನಶ್ಶಾಂತಿ ಮೊಳೆದೋರಿತು!

* * *

ರಾವಣನು ಸೀತೆಯನ್ನು ಸಾಗರ ತೀರದ ಬೆಟ್ಟದ ತುದಿಯ ಅಶೋಕವನದಲ್ಲಿ ಹುಲ್ಲುಮನೆಯಲ್ಲಿಟ್ಟಿದ್ದನು. ಒಂದಿರುಳು ಬೆಳುದಿಂಗಳಿನಲ್ಲಿ ಪೃಥ್ವಿಯು ವಿಶ್ವನಿದ್ರೆಯ ಕನಸಿನಂತಿತ್ತು. ನಿಶ್ಶಬ್ದತೆಯ ಪಕ್ಷಿಯ ರೆಕ್ಕೆ ಬಡಿತವೆಂಬಂತೆ ಕಡಲ ತೀರದ ತೆಂಗಿನ ಮರಗಳಲ್ಲಿ ಗರಿಗಳ ಮರ್ಮರ ನರ್ತಿಸುತ್ತಿತ್ತು. ಚಂದ್ರ ಸುಂದರ ವಿಶಾಲ ಸಾಗರವು ಸೀತೆಯ ಸಂಕಟಕ್ಕೆ ಅನುಕಂಪಿಸುವ ರೀತಿ ನರಳಿ ಹೊರಳಿ ನಿಟ್ಟುಸಿರುಬಿಡುತ್ತಿತ್ತು. ಆಗ ಸೀತೆಯ ಕಿವಿಗೆ ಬಂಗಾರ ನೂಪುರದ ಕಿಂಕಿಣಿ ಕೇಳಿಸಿತು. ಚಕಿತಳಾಗಿ ನೋಡುತ್ತಿರಲು ಆ ಅಮೃತ ರಾತ್ರಿಯೆ ಲಲನೆಯ ಆಕೃತಿ ಪಡೆದು ಬಂದಂತೆ ಕಂಡಿತು. ಹಾಲು ಬಿಳಿಯ ಸೀರೆಯುಟ್ಟು, ಭಯ ಭಕ್ತಿಯ ಗಂಭೀರ ನಡೆಯೊಡನೆ – ಭೂದೇವಿಯೆ ಕುಮಾರಿ ಸೀತೆಯನ್ನು ಸಂತೈಸಲು ಬಂದಂತಿತ್ತು!

ಅವಳು ಬಳಿಗೆ ಬಾರದೆ ದೂರದಿಂದಲೇ ಕೈ ಎತ್ತಿದಳು. ಆಶ್ಚರ್ಯವೆಂದರೆ ಅದು ತನಗೆ ಕೈ ಮುಗಿದಂತೆ ತೋರಿತು! ಅಚ್ಚರಿಯಿಂದ ನೋಡುತ್ತಿದ್ದರೆ ಧವಳಾಂಬರಧಾರೆಯು ವೀಣೆ ಮಿಡಿದಂತೆ ಅಸ್ಪಷ್ಟವಾಗಿ ಏನೋ ಹೇಳುತ್ತಿದ್ದಳು! ನಿಧಾನವಾಗಿ ರೋದಿಸುತ್ತಿದ್ದಳು. ಹೀಗೆ ಏಳು ರಾತ್ರಿಗಳು ಆ ಸ್ವಪ್ನ ರೂಪು ಬಂದು ನಮಸ್ಕರಿಸಿ ಹಿಂದಿರುಗಿತು. ಎಂಟನೆಯ ರಾತ್ರಿ ಸೀತೆ ಕನಿಕರದಿಂದ ಹತ್ತಿರ ಹೋಗಿ ಮಾತಾಡಿಸಿದಳು:

'ಯಾರಮ್ಮ, ತಂಗಿ ನೀನಾರು? ಏಳು ರಾತ್ರಿಗಳಿಂದ ನೋಡುತ್ತಿದ್ದೇನೆ; ಬಂದು ಗೋಳಾಡುತ್ತ ಏನೊ ಸಂಕಟ ಹೇಳುತ್ತಿರುವೆ; ಯಾರನ್ನೋ ಕರೆಯುತ್ತಿರುವೆ, ಯಾರನ್ನೋ ಬೇಡುತ್ತಿರುವೆ; ಯಾರ ರಕ್ಷಣೆಗೊ ವ್ರತಧಾರಿಯಾದಂತಿರುವೆ.'

ಆ ಮಹಿಳೆ ಹತ್ತಿರ ಬಂದು ಮೌನದಿಂದ ಮೃದುವಾಗಿ ಸೀತೆಯ ತಲೆಯನ್ನು ನೇವರಿಸಿದಳು. ಆಗ ಕಣ್ಣೆತ್ತಿ ನೋಡುತ್ತ ಸೀತೆ ಮಾತು ಮುಂದುವರಿಸಿದಳು:

'ರಾಕ್ಷಸನ ಕಪಟವೆಂದು ಮೊದಲು ಬೆದರಿದೆನು. ಗಮನಿಸುತ್ತ ಸಾಗಿದಂತೆ ನಿನ್ನ ಕೊರಳ ದುಃಖದ ನೈಜತೆ ತಿಳಿದೆನು. ಕರುಣೆಯುಂಟಾಯಿತು. ನೀನೂ ನನ್ನಂತೆ ರಕ್ಕಸನು ಎಳೆತಂದಿರುವ ಗರತಿಯಿರಬೇಕು! ಈ ಲಂಕೆಯಲ್ಲಿ ನಮ್ಮಂತಹ ದುಃಖಿಗಳು ಅದೆಷ್ಟು ಮಂದಿ ಇದ್ದಾರೊ?'

'ನಿನಗೆ ನಾನು ಅಕ್ಕ. ವಯಸ್ಸಿನಿಂದಷ್ಟೆ ಅಲ್ಲ, ದುಃಖದಿಂದಲೂ! ನನ್ನಂತಹ ಅತಿ ದುಃಖಿ ಲಂಕೆಯಲ್ಲಿ ಮಾತ್ರವಲ್ಲ, ಸೃಷ್ಟಿಯೊಳಗೇ ಯಾರೂ ಇಲ್ಲವೆಂದು ತಿಳಿ?'

'ದೇಶವನ್ನು ತ್ಯಜಿಸಿ, ವನವಾಸಿಯಾಗಿ, ರಾಕ್ಷಸನ ಪಾಪಕ್ಕೆ ಬಲಿಯಾದ ರಾಮನ ಸತಿಗಿಂತ ನೀನು ದುಃಖಿಯೆ?'

'ನಿಜ. ಸೀತೆಗಿಂತಲೂ ದುಃಖಿ ನಾನು. ಎಷ್ಟೋ ಸೀತೆಯರ ದುಃಖಾಗ್ನಿಯನ್ನು ಹೊತ್ತಿಸಿರುವವನಿಗೆ ಮಡದಿ ನಾನು.'

'ಮಂಡೋದರಿಯೆ ನೀನು?'

ಎಂದು ವಿಸ್ಮಯದಿಂದ ಅವನಿಜಾತೆ ಕೇಳಲು ಮಯನ ಮಗಳು ಅದಕ್ಕೆ ಉತ್ತರಿಸಿದಳು:

'ಹೌದು. ಆ ಹೆಸರಿನ ನಿರ್ಭಾಗ್ಯ ಹೆಣ್ಣು.'

'ಪೂಜ್ಯೆ, ಈ ಮೊದಲೇ ನಿನ್ನ ಶುಭಕೀರ್ತಿಯನ್ನು ಕೇಳಿದ್ದೆ. ಇಂದು ಕಂಡು ಧನ್ಯಳಾದೆ. ಹಿರಿಯಳಿಗೆ ನಮಸ್ಕರಿಸುತ್ತೇನೆ.'

'ಆರ್ಯೆ, ನಾನು ಅಸುರಿ. ನಮಿಸಬೇಡ.'

'ನೀನು ಅಸುರಿಯೆ? ಅಲ್ಲ. ಅಸುರಿಯಲ್ಲ, ದೇವತೆ! ಪತಿವ್ರತೆಯಾಗಿ ನಮಗೆಲ್ಲ ಆದರ್ಶ ಮಾತೆ! ನಿನಗೆ ನಮಸ್ಕರಿಸಲು ಬೇಗ ಒಳಿತಾಗುವುದೆಂದು ನಾನು ಬಲ್ಲೆ.'

'ಆ ಒಳಿತು ನಿನಗೆ ಬೇಗ ಒದಗಿ ಬರಲಿ. ನಿನ್ನ ಮಂಗಳವೆ, ನನಗೆ ಮಂಗಳ! ದೇವಿ, ನನ್ನಂತೆ ನೀನು ನನ್ನ ಪತಿಯ ಮನಸ್ಸು ಶುದ್ಧವಾಗುವಂತೆ ಪ್ರಾರ್ಥಿಸು. ಇದನ್ನು ಬೇಡಲೆಂದೇ ನಾನು ನಿನ್ನ ಸಾನ್ನಿಧ್ಯಕ್ಕೆ ಬಂದುದು.'

ಆ ನುಡಿ ಕೇಳಿ ಸೀತೆ ಮೌನಿಯಾದಳು. ತುಸುಹೊತ್ತಿನ ನಂತರ ಮಯನ ಮಗಳು 'ಎಲೈ ಪುಣ್ಯಚರಿತಳೇ, ನಿನ್ನನ್ನು ಸಂಧಿಸಲು ಲಂಕೇಶನು ಅನುಮತಿ ಕೊಡಲಿಲ್ಲ. ಹಾಗಾಗಿ ಈ ಮೊದಲೆ ನಿನ್ನ ದರ್ಶನದಿಂದ ಧನ್ಯಳಾಗಲು ಆಗಲಿಲ್ಲ. ನನ್ನ ಪ್ರಾರ್ಥನೆ ಫಲಿಸಿತು. ನೀನು ದರ್ಶನವಿತ್ತೆ; ಮಾತನಾಡಿಸಿದೆ... ನಾನು ಕೃತಾರ್ಥಳಾದೆ.

ತಂಗಿ, ಪಾತಿವ್ರತ್ಯವನ್ನು ಮೀರಿದ ಸಾಧನೆ ಇಲ್ಲ. ಕೊಳೆಗೆ ಬೆಂಕಿ ತಗುಲಿದರೆ ಕೊಳೆಯು ಉರಿಯಾಗುವಂತೆ ನಿನ್ನ ವ್ರತದಿಂದ ನನ್ನ ಪತಿಯ ಹೃದಯದ ಪಾಪದೋಷವು ದಹಿಸಿ ಹೋಗಲಿ. ಅವನಲ್ಲಿ ಸನ್ಮತಿ ಮೂಡಲಿ. ಸರ್ವರಿಗೆ ಸುಖ ಶಾಂತಿ ಲಭಿಸಲಿ!' ಎಂದು ಹೇಳಿದಳು.

ಸೀತೆ ಭಾವಲೋಕದಿಂದ ಎಚ್ಚರಗೊಳ್ಳುವ ಮೊದಲೇ ಅವಳಡಿಗೆ ತಲೆ ಬಾಗಿಸಿ, ನಮಸ್ಕರಿಸಿ ಪಾದಧೂಳಿಯನ್ನು ಧರಿಸಿಕೊಂಡಳು. ಬೆಳುದಿಂಗಳಿಂದ ಮೂಡಿದ ಹೆಣ್ಣು ಬೆಳುದಿಂಗಳಲ್ಲಿ ಲೀನವಾದಂತೆ ಹೊರಟು ಹೋದಳು.

ವ್ರತದ ಗುರಿ ಒಂದೇ ಆಗಿರಲು – ತನ್ನ ವ್ರತಕ್ಕೆ ಬೇರೊಬ್ಬರ ವ್ರತ ನೆರವಾಗುವುದೆಂದು ಸೀತೆ ಹರ್ಷಚಿತ್ತಳಾದಳು. ಮಂಡೋದರಿಯ ದೃಢತೆ ಮೈಥಿಲಿಯ ಚಿತ್ತಕ್ಕೆ ಉಕ್ಕಿನ ಸಾಣೆಯಾಯಿತು. ಸೆರೆಮನೆಯೆ ಆತ್ಮಸಾಧನೆಗೊಂದು ಎಲೆಮನೆಯಾಯಿತು. ರಾವಣನ ಲಂಕೆ ಮಂಡೋದರಿಯ ಲಂಕೆಯಾಯಿತು. ರಾವಣನ ಮೇಲಿದ್ದ ವೈರಭಾವ ಕರಗಿ, ಮಂಡೋದರಿಯ ಪತಿಯ ಮೇಲಿನ ಕರುಣೆಯಾಯಿತು.

* * *

ಶ್ರೀರಾಮಚಂದ್ರನು ಕಳುಹಿಸಿದ ಸುಗ್ರೀವದೂತ ಆಂಜನೇಯನು ರಾತ್ರಿ ಅಗೋಚರಿಯಾಗಿ ಸೀತೆಯನ್ನು ಹುಡುಕುತ್ತ ರಾವಣನ ಅರಮನೆಯ ಉಪವನಕ್ಕೆ ಬಂದನು. ದೇವ ಕುಟೀರದಲ್ಲಿ ಅವನ ಹೃದಯದ ಆನಂದವೇ ಮೂರ್ತಿಗೊಂಡಂತಿದ್ದ ಮಹಿಳಾ ಮೂರ್ತಿಯನ್ನು ಕಂಡನು. ಬಿಳಿಯುಡುಗೆಯ ಕೃಶಾಂಗಿ, ಶೋಕಪೂರಿತ ಗದ್ಗದ ಕಂಠದ ಮಂಡೋದರಿಯನ್ನು ಸೀತೆಯೆಂದು ಭಾವಿಸಿದನು. ಅವಳು ಶಿವಪಾರ್ವತಿಯರನ್ನು ಹೀಗೆ ಪ್ರಾರ್ಥಿಸುತ್ತಿದ್ದಳು:

'ಭುವನ ಗುರುವೇ ಕರುಣಿಸು. ಆರ್ತಜನ ಕಲ್ಪತರುವೇ ಪತಿಗೆ ಆತ್ಮಶಾಂತಿಯನ್ನು ನೀಡು. ಅವನ ಮತಿಗೆ ಶುಭವನ್ನುಂಟು ಮಾಡು. ನನಗೆ ಪತಿಭಿಕ್ಷೆ ನೀಡು. ಹೇ ಕಾಮ ಸಂಹಾರಿಯೇ, ನನ್ನ ಪತಿಯು ಕಾಮನ ಚಿತೆಗೆ ಆಹುತಿಯಾಗದಂತೆ ನನ್ನ ಮುತ್ತೈದೆತನವನ್ನು ಕಾಪಾಡು. ತಾಯೆ ಗಿರಿಜಾತೆ, ನೀನು ತಪಸ್ಸು ಮಾಡಿ ನಿನ್ನ ಪತಿಯನ್ನು ಹೇಗೆ ಪಡೆದೆಯೊ, ಹಾಗೆಯೇ ನಾನು ನನ್ನ ಮನದನ್ನನ ಆತ್ಮವನ್ನು ಪಡೆಯಲು ಕೃಪೆಮಾಡು. ನಿನ್ನ ಬಾಲೆಯನ್ನು ಈ ಬೆಂಕಿಯ ಸಂಕೋಲೆಯಿಂದ ಕೊನೆಗಾಣಿಸಿ ಕಾಪಾಡು ತಾಯಿ.'

ಎಂದು ಅಳುತ್ತ ಹೆಣ್ಣು ಕ್ರೌಂಚ ಪಕ್ಷಿಯಂತೆ ದೇವ ದಂಪತಿಗಳಿಗೆರಗಿದಳು. ಆ ತಾಯಿಯ ದುಃಖವನ್ನು ಸಹಿಸಲಾರದೆ ರಾಮನ ಪ್ರೀತಿಗೆ ಪಾತ್ರಳಾದ ಅವಳನ್ನು ಸಂತೈಸಲು ಆಂಜನೇಯನು 'ರಾಮಚಂದ್ರಂ ಗೆಲ್ಗೆ! ಜನಕ ನಂದಿನಿ ಬಾಳ್ಗೆ!' ಎಂದು ಘೋಷಿಸಿದನು. ಅದನ್ನು ಕೇಳಿದ ತಕ್ಷಣ ಅವಳು ಚೀರಿದಳು. ಬ್ರಹ್ಮಚಾರಿಯು ಕಳವಳಗೊಂಡು ಬೆಪ್ಪಾಗಿ ತಪ್ಪು ಮಾಡಿದೆನೇನೊ ಎಂದುಕೊಂಡು ಮಿಳ್ಮಿಳನೆ ನೋಡುತ್ತಿದ್ದನು. ದಡಕ್ಕನೆ ಕದ ತೆರೆದು ಓರ್ವ ಸ್ಫುರದ್ರೂಪಿ, ಅಭಯ

ಸ್ವರೂಪಿ ಒಳಗೆ ಬಂದನು. ಆ ಗಾತ್ರಕ್ಕೆ, ತೇಜಕ್ಕೆ, ಶೃಂಗಾರಶೀಲ ವಿನಯದ ರಸಿಕ ಪೌರುಷಕ್ಕೆ, ಸುವರ್ಣ ಅಂಚಿನ ಪಿತಾಂಬರದ ಉಡುಗೆಯ ರಾಜತೇಜಕ್ಕೆ ಮಾರುತಿ ಮೂಕವಿಸ್ಮಿತನಾದನು. 'ಇವನಾರು? ಈತನಾರು? ಈ ಮಹಾಪುರುಷನಾರು! ಇಂತಹ ತೇಜಸ್ವಿಯನ್ನು ಇದುವರೆಗೆ ಕಂಡಿಲ್ಲ.' ಎಂದುಕೊಂಡನು.

ಬಂದವನ ದರ್ಪಧ್ವನಿಯ ಬಿರುಸಿಗೆ ಮಂದಿರದ ಮೌನ ಅದುರಿತು. 'ಕಾಂತೆ, ನಿನ್ನದೇನು ಈ ಭ್ರಾಂತಿ? ನಿನ್ನದೆಸೆಯಿಂದಾಗಿ ನನಗೆ ಹಲವು ದಿನಗಳಿಂದ ಶಾಂತಿಯಿಲ್ಲ. ನಿನ್ನ ಬುದ್ಧಿ ಸ್ಥಿರತೆ ಗೆಟ್ಟು ಭ್ರಮೆಗೆ ವಶವಾಗಿದೆ. ನೀನು ಮಹಾರಾಣಿಯಾಗಿದ್ದರೂ ಕ್ಷಾತ್ರ ತೇಜವನ್ನು ತ್ಯಜಿಸಿ ನಿರ್ಲಜ್ಜೆಯಿಂದ ಜೀವಿಸುತ್ತಿರುವೆ. ಆ ನಿಸ್ತೇಜತೆಗೆ ನನ್ನನ್ನೂ ಸೆಳೆಯುತ್ತಿರುವೆ. ನಿನ್ನ ಬಿಸಿ ಮಿದುಳು ಕುದಿಯಿಸುವ ಹುಸಿ ಭೀತಿಯಿಂದ ನಿನ್ನನ್ನು ಕಾಪಾಡಲು – ನಿದ್ದೆ ತೊರೆದು, ನಿನಗೆ ಕಾವಲಿರಲು ಬಂದಿದ್ದೇನೆ. ಈ ಬನದಲ್ಲಿ, ಇಲ್ಲಿಗೆ ಯಾರೂ ಪ್ರವೇಶಿಸದಂತೆ ಆಜ್ಞೆ ಮಾಡಿದ್ದೇನೆ. ಶಾಂತಮನದಿಂದ ಪೂಜೆ ಮಾಡು. ನಾನೇ ಕಾವಲಿರುವಾಗ ನಿನಗೆ ಎಂತಹ ಭೀತಿ? ಏಕೆ ಚೀರಿದೆ? ಏಕೆ ನಡುಗುತ್ತಿರುವೆ ಹೇಳು ಪ್ರಿಯೆ?'

ಅವನ ಕಂಠಸ್ವರದ ಕರುಣರೋಷಕ್ಕೆ ಅಲ್ಲಿಯ ನೀರವತೆ ನಡುಗುತ್ತಿತ್ತು! ಕಾಂತೆಯು ನಡುಗುತ್ತ, ತಲೆಬಾಗಿ ಹೀಗೆ ಹೇಳಿದಳು:

'ಪ್ರಭೂ, ಹೋದ ಸಂಜೆ ಬಿದ್ದ ಉಲ್ಕೆಯ ಅಶುಭವನ್ನು ಪರಿಹರಿಸಲೆಂದು ಪರಮೇಶ್ವರನನ್ನು ಪ್ರಾರ್ಥಿಸಲು ಬಂದೆನು. ನಿನಗೆ ಒಳಿತನ್ನು ಬೇಡುತ್ತಿರಲು ಹತ್ತಿರದಲ್ಲಿ ಯಾರೊ 'ರಾಮಚಂದ್ರಂಗೆಲ್ಗೆ! ಜನಕ ನಂದಿನಿ ಬಾಳ್ಗೆ!' ಎಂದು ಸ್ಪಷ್ಟವಾಗಿ ಘೋಷಿಸಿದಂತಾಯಿತು. ಪ್ರಜ್ಞೆಗೆ ದಿಗಿಲಾಗಿ ಚೀರಿದೆನೊ ಏನೋ ನನಗೆ ಗೊತ್ತಿಲ್ಲ.'

'ದೇವಿ, ನಿನ್ನ ಹೃದಯವೇ ನಿನಗೆ ಕಿವಿಯಾಯಿತು. ನಿನ್ನುಸಿರ ಹರಕೆಯನ್ನೇ ನಿನ್ನ ಕಿವಿ ಧ್ಯಾನ ಸಮಯದಲ್ಲಿ ಆಲಿಸಿತು. ಅಷ್ಟಲ್ಲದೆ ಬೇರೇನೂ ಇಲ್ಲ.'

'ಜೀವೇಶ, ನಿನಗೆ ಅಶುಭವನ್ನು ನಾನು ಹೇಗೆ ನೆನೆಯುವೆ?'

'ನನಗೆ ಅಶುಭವನ್ನಲ್ಲ, ಅವರಿಗೆ ಶುಭವನ್ನು.'

'ಪ್ರಭು, ಸರ್ವರಿಗೂ ಶುಭವಾಗಲಿ. ಕಲ್ಯಾಣ ಕಲ್ಪತರು, ಲೋಕಗುರು ಶಿವನ ಬಳಿ ಪ್ರಾರ್ಥನೆಗೆ ಕೃಪಣತೆ ಏಕೆ?'

'ಅವನು ತನ್ನಿಚ್ಛೆಯಂತೆ ಶುಭವನ್ನುಂಟು ಮಾಡುತ್ತಾನೆ. ನಿನ್ನಿಚ್ಛೆ ನನ್ನಿಚ್ಛೆಯಂತಲ್ಲ. ಸೀತೆಯನ್ನು ನೀನು ನೋಡಿದೆಯಾ?'

'ಕ್ಷಮಿಸಿ, ನೋಡಿದೆ, ನಿಮ್ಮಾಜ್ಞೆಯನ್ನು ಮೀರಲಿಲ್ಲ. ಆ ಪೂಜ್ಯೆ ನನಗೆ ದರ್ಶನವಿತ್ತಳು.'

'ಆ ಪೂಜ್ಯೆ ನಿನಗೆ ದರ್ಶನ ನೀಡಿದ್ದು ಸ್ವಪ್ನ ಲೋಕದಲ್ಲಿಯೆ?'

'ಅಲ್ಲಲ್ಲ. ಅಶೋಕವನದಲ್ಲಿ!'

'ಎಂತೊ? ಅಂತು ಕಂಡಿರುವುದು ನಿಜ.'

'ನಿಜ'

'ನಾನು ಕೆಟ್ಟೆ.'

'ಶಿವ ಶಿವಾ, ಅಮಂಗಳ ತೊಲಗಲಿ.'

'ನಾನು ಕೆಟ್ಟೆ. ನೀನು ಕೊಂದೆ. ಮಯಕುಮಾರಿ ಹಿಂದೆಂದೂ ಸೋಲರಿಯದ ನನ್ನನ್ನು ನೀನು ಶುಭಕ್ಕಾಗಿ ಸೋಲಿಸಿದೆ. ಹೇಳುತ್ತೇನೆ ಕೇಳು ದೇವಿ. ಹಿತ ಮತ್ತು ಪ್ರಿಯ, ರುಚಿ ಮತ್ತು ಶುಚಿಗಳ ನಡುವೆ ನಡೆಯತ್ತಿರುವ ಯುದ್ಧಕ್ಕೆ ನನ್ನ ಹೃದಯ ರಣರಂಗವಾಗಿದೆ. ನೀನು ಮುಂದಿರಲು ನೀನು, ಅವಳನ್ನು ನೆನೆಯಲು ಅವಳ ಬಯಕೆ!'

'ಮನದನ್ನ, ಈಗಲೇ ಅಶೋಕವನಕ್ಕೆ ನಡೆಯಿರಿ. ನಿಮ್ಮೊಡನೆ ನಾನು ಬರುತ್ತೇನೆ.'

'ಚಂದ್ರನಖಿಗೆ ಹೇಳಿದ್ದೇನೆ ನಾಳೆ ಸೂರ್ಯೋದಯಕ್ಕೆ ಅಲ್ಲಿಗೆ ಒಬ್ಬನೆ ಹೋಗುತ್ತೇನೆ. ಅದು ಕೊನೆಯ ಪ್ರಯತ್ನ. ಮಂಡೊದರಿ, ನಿನ್ನ ರಾವಣನು ಸುಮ್ಮನೆ ಸೋಲುತ್ತಾನೆ ಎಂದು ತಿಳಿಯಬೇಡ.'

ಅವನ ಕಾಮರೋಷ ಧ್ವನಿಗೆ ಪತ್ನಿ ಅಳುಕಿದಳು. ದಶಶಿರನ ಮುಖದಲ್ಲಿ ವಿಕೃತಿ ತುಳುಕಿತು. ಓಡಿ ಅವನ ಕಾಲುಗಳನ್ನು ತಬ್ಬಿದಳು. ಮರಕ್ಕೆ ಬಳ್ಳಿಯಂತಾಗಿ ಅವಳ ಉಸಿರು ಹೂವಾಗಿ ಕಂಪಿಸಿತು.

'ರಾಜೇಂದ್ರ ಬೇಡ. ಬೇಡೀ ಹಠದ ಸಾಹಸ. ರುಚಿಗೆಂದು ಕೈಕೊಂಡದ್ದನ್ನು ಛಲದಿಂದ ಮುಂದುವರಿಸುವುದು ಸುಖವೆ? ಸರಸವೆ? ಸಚ್ಚರಿತವೆ? ಪತಿವ್ರತೆಯ ವ್ರತದ ಮಹಿಮೆಯಿಂದ ಸಂಯಮ ದೊರೆತರೆ ಬುದ್ಧಿವಂತರು ಅದನ್ನು ಸೋಲೆಂದು ಕರೆಯುತ್ತಾರೆಯೆ? ಮಂಗಳಕ್ಕೆ ತಲೆಬಾಗಿದರೆ ಅದು ಸೋಲೆ? ಆ ಗೆಲುವನ್ನು ಮೀರಿಸಿದ ಗೆಲುವು ಬೇರೆ ಇದೆಯೆ? ಇಂದ್ರನನ್ನು ಜಯಿಸಿದವನಿಗಿಂತ ನೂರುಮಡಿ ವಿಜಯ ವಿಕ್ರಮಿ ಇಂದ್ರಿಯ ವಿಜಯಿ ಅಲ್ಲವೆ? ಹುಸಿ ಪ್ರತಿಷ್ಠೆಯನ್ನು ಬಿಡು. ಸತ್ಯಕ್ಕೆ ಸೋಲಲು, ಅದೇ ನಮಗೆ ಗೆಲುವು. ಧರ್ಮಕ್ಕೆ ಸೋಲಲು ಅದೇ ನಮ್ಮ ಗೆಲುವು. ಆ ಗೆಲುವೆ ನಮ್ಮ ಸಾಮ್ರಾಜ್ಯದ ಸಂಪತ್ತು.'

ತನ್ನ ಮನದನ್ನೆಯ ಭಾವಭಾರಕ್ಕೆ ನೃಪ ನಸುಬಾಗಿದನು. ಮನಸ್ಸು ಕರಗಿತು. ತಲೆ ಮೇಲೆತ್ತಿದ್ದ ಸತಿಯ ಮುಖದ ಮೇಲೆ ಅವನ ನೇತ್ರದ ಬಿಸುಗಂಬನಿ ಉದುರಿತು.

'ಪ್ರಿಯೆ, ಕ್ಷಾತ್ರ ತೇಜಸ್ಸು ಸೋಲನ್ನು ಬಯಸುವುದಿಲ್ಲ. ವೀರರ ಬಯಕೆ ಗೆಲುವು; ಸೋಲಲ್ಲ. ನೀನು ಹಾರೈಸುವ ಸೋಲು ತಾನಾಗಿ ಬಂದರೆ ಬರಲಿ... ಸೀತೆಯನ್ನು ಮೊದಲು ಚೆಲುವಿಗೆ ಒಲಿದೆನು. ಅವಳು ಆಹಾರ ಸ್ನಾನವನ್ನು ತೊರೆದು ಸೌಂದರ್ಯವನ್ನು ಹಾಳುಗೆಡಿಸಿಕೊಂಡಳು. ಈಗ ಛಲಕ್ಕಾಗಿ ಅವಳನ್ನು ಮೋಹಿಸುತ್ತಿರುವೆ.'

'ನನ್ನ ನಲ್ಲ, ಛಲ ಅಲ್ಲಿ ಸಲ್ಲದು.'

'ಈಗ ನನಗೊಂದು ಹೆದರಿಕೆ ಕಾಡುತ್ತಿದೆ. ಹಿಂದಿನಂತೆ ಮತ್ತೆ ಮತ್ತೆ

ಆಕೆಯನ್ನು ನೋಡುವುದಿಲ್ಲ. ಅವಳ ಕರುಣೆಯಿಂದ ನನ್ನ ದೃಢತೆಗೆ ಎಲ್ಲಿ ಭಂಗ ಉಂಟಾಗುವುದೋ ಎಂದು ಭೀತಿಯುಂಟಾಗುತ್ತಿದೆ. ಓಹ್, ಅವಳೊಂದು ಕಡೆ ನೀನೊಂದು ಕಡೆ, ಮತ್ತೆ ಆ ವಿಭೀಷಣನು ಇನ್ನೊಂದು ಕಡೆ. ನೀವೆಲ್ಲ ನನ್ನ ಚಿತ್ತವನ್ನು ಚಂಚಲಗೊಳಿಸುತ್ತಿರುವಿರಿ. ಇರಲಿ ನಿಮ್ಮನ್ನು ಗೃಹ ವೈರಿಗಳೆಂದು ತಿಳಿದು ರಾಮನನ್ನು ಗೆಲ್ಲುವಂತೆ ನಿಮ್ಮನ್ನು ಗೆಲ್ಲುವುದೇ ನನ್ನ ಪ್ರತಿಜ್ಞೆ'

ಎಂದು ಲಂಕೇಶ್ವರನು ಹೇಳಿದನು. ಮಂಡೋದರಿಯು ಕಣ್ಣುಮುಚ್ಚಿ ಶಿವ ಪಾರ್ವತಿಯರಿಗೆ ಕೈ ಮುಗಿದು ಧ್ಯಾನ್ಯಶೀಲಳಾದಳು.

* * *

ಶ್ರೀರಾಮಚಂದ್ರನ ವಾನರ ಸೇನೆಯೊಂದಿಗಿನ ಘನಘೋರ ಯುದ್ಧದಲ್ಲಿ ರಾವಣನ ಸೇನೆಯು ಸೋಲನ್ನು ಅನುಭವಿಸಿತು. ಮಯನ ಮಗಳಾದ ಮಂಡೋದರಿಯು ತನ್ನ ಒಬ್ಬನೇ ಮಗ ಇಂದ್ರಜಿತುವಿನ ದುರ್ಮರಣದ ಸಿಡಿಲ ಹೊಡೆತಕ್ಕೆ ತಡೆಯಲಾರದೆ ಜರ್ಜರಿತಳಾದಳು. ಲಂಕೇಶ್ವರನು ಅವಳ ಮೋಹದ ಒಡಲನ್ನು ಬಾಚಿ ತಬ್ಬಿ ತನ್ನ ಎದೆಗೆ ಒತ್ತಿಕೊಂಡು ಸಂತೈಸುತ್ತಿದ್ದನು. ಅವನ ಕೆಂಗಣ್ಣುಗಳಿಂದ ದಪ್ಪ ದಪ್ಪನ ಹನಿ ಉದುರುತ್ತಿದ್ದವು. ಬೆಂಕಿಯು ತಾನು ದಹಿಸುವ ಹಸಿ ಸೌದೆಯ ತುದಿಯಿಂದ ನೀರು ಸೋರಿಸುವಂತೆ – ಹೃದಯದಲ್ಲಿ ಹುದುಗಿದ್ದ ಕುದಿಯುವ ಕಟು ನೀರನ್ನು ಸ್ರವಿಸುವಂತೆ ದುಃಖಿಸುತ್ತಿದ್ದನು. ಪತ್ನಿಯನ್ನು ಸಂತೈಸುತ್ತ ಹೇಳಿದನು:

'ರಾಣಿಯೆ ಶೋಕವನ್ನು ತಡೆದುಕೊ. ನನ್ನನ್ನು ನೋಡು. ಮನಸ್ಸನ್ನು ಕಲ್ಲಾಗಿಸು. ನನಗಾಗಿ ಮಗನ ಹಂಬಲವನ್ನು ಮರೆ. ಈ ದುಃಖದಿಂದ ನನ್ನ ಎದೆಯ ಕೆಚ್ಚಿನ ಮರದ ಬೇರುಗಳನ್ನು ಸುಡದಿರು. ಐರಾವತವನ್ನು ಏರಿದ ಇಂದ್ರನನ್ನು ಸೋಲಿಸಿದ ಮಗ, ರಾಮ ವಾನರರ ಸೇನೆಯನ್ನು ತನ್ನ ಮಾಯೆಯಿಂದ ಕಂಗೆಡಿಸಿ ಕೊಂದ ಮಗ, ರಾಕ್ಷಸರ ಕುಲದ ಗೌರವಕ್ಕೆ ಕಲಶಪ್ರಾಯನಾಗಿದ್ದ ಮಗ, ನನ್ನ ಸೈನ್ಯವೆಂಬ ಮೇರುಗಿರಿಗೆ ಮೇರುದಂಡದಂತಿದ್ದ ಗಂಡುಗಲಿ ಮೇಘನಾದನು ಹಗೆಯ ಮೋಸಕ್ಕೆ ಸಿಲುಕಿ ಬಲಿಯಾದರೇನು? ಧ್ಯಾನದಲ್ಲಿದ್ದವನನ್ನು ಕೊಂದ ಹೇಡಿ ರಾಮಾನುಜನು ವೀರನಾಗುತ್ತಾನೆಯೆ?

'ರಾಣಿಯೇ, ಇಂದ್ರಜಿತುವನ್ನು ಕೊಂದ ಮೋಸಗಾರನ ಕಳೇಬರವು ನನ್ನ ಈ ನೆಲದಲ್ಲಿ ಹುಳುಗಳ ಉಣಿಸಾಗಿ ಕೊಳೆಯುವುದು. ಹಾಗೆ ಮಾಡಿದಾಗ ನನಗೆ ತೃಪ್ತಿ! ನಿನ್ನ ಕಣ್ಣೀರಿನ ಎರಡರಷ್ಟು ಕಣ್ಣೀರು ಸುರಿಯುವಂತೆ ಮಾಡುತ್ತೇನೆ. ನಮ್ಮ ಸಂಕಟ ಪರಂಪರೆಗೆ ಕಾರಣಳಾದ ಆ ಹೃದಯ ಶೂನ್ಯೆ; ನನ್ನ ಜೀವನ ಶೂಲರೂಪಿ ಭೂ ಸುತೆಯನ್ನು ತುಂಡರಿಸುತ್ತೇನೆ!...'

ನಿಟ್ಟುಸಿರು ಹೊಮ್ಮಿ, ಧ್ವನಿ ಕುಗ್ಗಿತು. ಕೊರಳ ಸೆರೆ ಬಿಗಿಯಿತು. ಮಂಡೋದರಿಯ ಕಣ್ಣನ್ನು, ಮುಖವನ್ನು ವಲ್ಲಿಯ ಸೆರಗಿನಂಚಿನಿಂದ ಒರಸಿದನು. ಲಂಕೇಶ್ವರನು ತನ್ನ ಹೃದಯೇಶ್ವರಿಯ ಮುಖ ಮಂಡಲದಲ್ಲಿ ದೃಷ್ಟಿ ನೆಟ್ಟು ಕಲ್ಲಾದಂತೆ ಕುಳಿತನು. ಬಳಿಕ ಸಮಾಧಾನಗೊಂಡು ಮಾತು ಮುಂದುವರಿಸಿದನು.

'ಏನಿದು? ಯಾವ ಭಯದಿಂದ ನಿನ್ನ ಮುಖ ವಿಕಾರವಾಗಿದೆ ಹೇಳು. ಬೆದರದಿರು. ಮಹಿಷಿಯೆ, ನನಗೇಕೆ ಕೈ ಮುಗಿಯುತ್ತಿರುವೆ? ನಿನ್ನ ವಿರೂಪಗೊಂಡ ವದನವನ್ನು ನಾನು ನೋಡಲಾಗುತ್ತಿಲ್ಲ! ತಪ್ಪಾಯ್ತು. ಅವಳನ್ನು ಕೊಲ್ಲುವುದಿಲ್ಲ; ಕ್ಷಮಿಸು!'

ಹಾಗೆ ಹೇಳಿದ ಪತಿಗೆ ಕೃತಜ್ಞತೆಯನ್ನು ಅರ್ಪಿಸುವ ರೀತಿಯಲ್ಲಿ ಮಯನ ಮಗಳು ಪೂಜ್ಯಭಾವದಿಂದ ಅವನ ಕಾಲು ಹಿಡಿದಳು. ಅದರ ಧೂಳನ್ನು ತನ್ನ ಮುಡಿಗೆ ಉದುರಿಸಿಕೊಂಡಳು.

* * *

ಲಂಕೇಶ್ವರನು ತಾನು ಯುದ್ಧಕ್ಕೆ ಹೋಗುವ ಹಿಂದಿನ ರಾತ್ರಿ ದೀವಿಗೆಗಳ ಹೇಮ ಮಂದಿರದಲ್ಲಿ ಸಂಕಲ್ಪ ಸಿದ್ಧಿಗಾಗಿ ಮಹಾದುರ್ಗೆಯ ಧ್ಯಾನದಲ್ಲಿದ್ದನು. ಅದು ಫಲಿಸಿತು. ದಶಾನನನು ಸ್ವಪ್ನದಲ್ಲಿ ದೇವಿಯ ನುಡಿಯಂತೆ – ಸೀತೆಯ ಮಕ್ಕಳಾಗಿ ಅವನು ಮತ್ತು ತಮ್ಮ ಕುಂಭಕರ್ಣನು ಹುಟ್ಟಿದುದನ್ನು ಕಂಡನು.

ತಾನು ಆ ರೀತಿ ತನ್ನ ತಮ್ಮನ ಜೊತೆಯಲ್ಲಿ ಶಿಶುವಾಗಿ ಆಶ್ರಮದಲ್ಲಿ ಜಾನಕಿಯ ತೊಡೆಯ ಮೇಲೆ ಆಡುತ್ತಿದ್ದ ಅದ್ಭುತಕ್ಕೆ ಬೆಚ್ಚಿಬಿದ್ದು ರಾವಣನು ಎಚ್ಚೆತ್ತನು. ತನ್ನ ತನವನ್ನು ಪುನಃ ಮರೆವಿನ ಮರಣದಿಂದ ಎತ್ತಿ, ಸುಸ್ಮೃತಿಗೆ ಎಳೆದು ಸಂಸ್ಥಾಪಿಸಿಕೊಳ್ಳುವವನಂತೆ ಕರೆದು, ಒರಲಿ ಕೂಗಿದನು:

'ಮಂಡೋದರೀ! ಮಯಾತ್ಮಜೇ! ಪ್ರಿಯೇ! ನನ್ನನ್ನು ರಕ್ಷಿಸು.'

ಮಯನ ಮಗಳು ಪೂಜಾ ಮಂದಿರದಲ್ಲಿ ಹಸುಳೆಯ ಅಳುಕೇಳಿ ಆಶ್ಚರ್ಯಗೊಂಡಳು. ದಶಾನನನ ದುಃಸ್ವಪ್ನ ವರ್ತನೆಗೆ ತಳಮಳಿಸಿದಳು. ಮೀಸೆ ಹೊತ್ತ ಮಹಾದೈತ್ಯ ಚಕ್ರೇಶ್ವರನು ಆಗ ತಾನೆ ಹುಟ್ಟಿದ ಹಸುಳೆಯ ರೀತಿ ಅಳುವ ವಿಕಾರಕ್ಕೆ ಬೆದರಿದಳು. ತನ್ನ ತೊಡೆಯನ್ನು ಅವನಿಗೆ ತಲೆದಿಂಬಾಗಿಸಿ ಮಲಗಿಸಿಕೊಂಡಳು. ಅವನ ಹಣೆಯ ಬೆವರು ಒರಸಿ ಬೀಸಣಿಕೆಯಿಂದ ಬೀಸಿ ಶೈತ್ಯೋಪಚಾರ ಮಾಡಿದಳು. ತನ್ನ ನಾಥನನ್ನು, ಇಂದ್ರನನ್ನು ಗೆದ್ದವನನ್ನು, ಹುಸುಳೆಯಂತೆ ಭೀತಿಗೊಂಡವನನ್ನು ಬಿಗಿದಪ್ಪಿ, ಚುಂಬಿಸಿ, ಕರೆಕರೆದು ಮೈದಡವಿದಳು. ಪತಿ ಪ್ರಾಣೆಯಾದ ಅವಳು ಅವನನ್ನು ಸ್ವಪ್ನ ಸ್ಥಿತಿಯಿಂದ ಜಾಗೃತ ಸ್ಥಿತಿಗೆ ತಂದಳು. ಎಚ್ಚೆತ್ತು ತನ್ನ ಹೆಸರು ಹಿಡಿದು ಕರೆದವನಿಗೆ ಹೇಳಿದಳು:

'ಸ್ವಾಮಿ ಇಲ್ಲಿಯೆ ಪಕ್ಕದಲ್ಲಿ ಇದ್ದೇನೆ. ಹಾಳು ಕನಸಿಗೆ ಹೆದರಬೇಡ!'

'ನಾನು ಕಂಡದ್ದು ಕನಸಲ್ಲ! ಪ್ರಿಯೆಯೆ, ನಾನೀಗ ಎಲ್ಲಿದ್ದೇನೆ ಹೇಳು?'

'ಲಂಕೆಯಲ್ಲಿ, ನಮ್ಮ ಅರಮನೆಯ ಶಿವಮಂದಿರದಲ್ಲಿ.'

'ನನ್ನ ಮೈ ಎಲ್ಲಿ? ಮುಖವೆಲ್ಲಿ?'

ಆ ಪ್ರಶ್ನೆಗೆ ಪತ್ನಿಯು ನೊಂದಳು. ಅವನನ್ನು ಮುಟ್ಟಿ ತಡವುತ್ತ ಹೇಳಿದಳು:

'ಇಲ್ಲಿವೆ, ಇಲ್ಲಿ!'

'ನಾನು ಯಾರು?'

'ದಶಗ್ರೀವ ಅಸುರೇಶ್ವರ! ಮತ್ತು ಮಂಡೋದರಿಯ ಜೀವಿತೇಶ್ವರ.'

'ಹೌದೆ! ಹೌದೆ! ಪ್ರಿಯೆ, ಬರಿಯ ಮರವೆ ಅಲ್ಲ. ನನ್ನ ಆತ್ಮವು ಪ್ರಜ್ಞಾ ವಿಸ್ಮೃತಿಗೊಳಗಾಗಿ ಪುನರ್ಜನ್ಮಕ್ಕೆ ಜಾರಿದಂತಾಯಿತು. ನನ್ನ ಅಹಂಕಾರದ ಈ ಪುರುಷ ಪ್ರಯತ್ನವೆಲ್ಲವನ್ನು ತೃಣಸಮಾನವಾಗಿಸಿ ಅಗ್ನಿ ವೈತರಣಿಯಲ್ಲಿ ವಿಸರ್ಜಿಸಿದೆನು! ಮಹಾ ಪ್ರಯತ್ನದಿಂದ ಹಿಂತಿರುಗಿದೆನು!' ಎಂದು ನಕ್ಕು ಹೇಳುತ್ತ ಮಾತನ್ನು ಮುಂದುವರಿಸಿದನು:

'ನಲ್ಲೆ, ಒಂದು ವಿನೋದವನ್ನು ಕೇಳು. ನಾನು ಯಾವುದೊ ಋಷಿಯ ಆಶ್ರಮದಲ್ಲಿ ದಿವಂಗತ ಸಹೋದರರ ಜೊತೆಗೂಡಿ ವೈದೇಹಿಗೆ ಮಕ್ಕಳಾಗಿ ಅವಳ ತೊಡೆಯಲ್ಲಿ ಅಳುತ್ತಿದ್ದಂತೆ...'

ಎಂದು ಹೇಳಿ, ಮುಂದಕ್ಕೆ ಏನೂ ಹೇಳಲಾಗದೆ ಸುಮ್ಮನಿದ್ದ ಪತಿಗೆ ಮಯನ ಮಗಳು,

'ಕನಸಾಯ್ತೆ'

ಎಂದು ಪ್ರಶ್ನಿಸಿದಳು. ಅದಕ್ಕೆ ದೇವ ದಾನವ ಭಯಂಕರನು ತಲೆದೂಗುತ್ತ ಹೇಳಿದನು.

'ಅಲ್ಲ, ಅಲ್ಲ! ಅದು ಕನಸಿನ ರೀತಿ ಅಲ್ಲ!'

'ಹಾಗಾದರೆ?'

'ಮಡದಿಯೆ, ಆ ಅನುಭವ ವಿಶೇಷವನ್ನು ನಾನು ಹೇಗೆ ಹೇಳಲಿ? ಹೋಲಿಕೆಗೆ ಸಿಗದ ಅಸಾಮಾನ್ಯ ಅನುಭವ. ನನಗೆ ಇಂಥಹದು ಇದೆ ಮೊದಲು! ಏನೇ ಆದರೂ ಅದು ಕನಸಲ್ಲ!'

'ನಿನಗೆ ಸೀತೆಯಲ್ಲಿ ಉಂಟಾದ ಸಾತ್ತ್ವಿಕದ ಭಾವ ಶುದ್ಧಿಯೆ ದಿಟವಾಗಿಯೂ ಪ್ರತಿಮಾತ್ಮಕವಾಗಿ ಸ್ವಪ್ನ ರೂಪ ಪಡೆದಿದೆ.'

'ತಂಗಿಯ ಉಪದೇಶವಾಗಿದೆಯೊ ನಿನಗೆ?'

'ಅತ್ತಿಗೆಯು, ನಿನ್ನ ವೀರಧರ್ಮ ಆಲೋಚನೆಯ ಆ ಭವ್ಯ ಮಾರ್ಗ ತಿಳಿಸಿದಳು!'

'ನಿನಗೆ ಒಪ್ಪಿಗೆಯೆ? ಹೇಳು ದೇವಿ! ನನಗೆ ನೀನೊಬ್ಬಳು ಮಾತ್ರ ಪಾಪಿಯನ್ನು ಕೈಬಿಡದೆ ಪುಣ್ಯಕ್ಕೆ ಒಯ್ಯುವ ದೇವಿ'

ಮಂಡೋದರಿಯು ಪ್ರಶಂಸೆಗೆ ಬಾಗಿ ಕಾಲು ಹಿಡಿದಳು. ಅವಳ ಕಣ್ಣೀರನ್ನು ಒರಸಿ ಮಾತು ಮುಂದುವರಿಸಿ,

'ನಿಜ ದೇವಿ, ರಾವಣನಿಗೆ ನೀನೊಬ್ಬಳೆ! ಮತ್ತು ಸೀತೆ!'

ಎಂದು ಹೇಳಿ ಮನಸ್ಸಿನಲ್ಲಿ ಮೂಡಿದ ಮೈಥಿಲಿಯ ಚಿತ್ರಕ್ಕೆ ಅಸುರನು ಕೈ

ಮುಗಿದನು. ಮಂಡೋದರಿಗೆ ರೋಮಾಂಚನವಾಗುವಂತೆ ತನ್ನ ಆಂತರ್ಯವನ್ನು ವ್ಯಕ್ತಪಡಿಸಿದನು:

'ನಿನಗಿಂತಲೂ ಮಿಗಿಲಾಗಿ ಸೀತೆ ನನಗೆ ದೇವತೆ, ಮಾತೆ! ಶ್ರದ್ಧೆಗೆಟ್ಟಿದ್ದ ನನಗೆ ಶ್ರದ್ಧೆ ಮತ್ತೆ ಬರುವಂತೆ ಮಾಡಿ ಆತ್ಮದ ಉದ್ಧಾರವನ್ನು ತಂದ ದೇವತೆ, ಪುಣ್ಯ ಮಾತೆ!'

'ನಾನು ಧನ್ಯಳಾದೆ! ಬಾಳು ಸಾರ್ಥಕವಾಯಿತು! ಸಾವೊ ಬದುಕೊ? ಇನ್ನು ನನಗೆ ಆ ವ್ಯಥೆ ಇರದು. ನಿನ್ನ ಈ ಹೃದಯವನ್ನು ತಿಳಿದರೆ ತ್ರಿಮೂರ್ತಿಗಳು ಬಂದು ಅಲ್ಲಿ ಮೀಯದೆ ಇರುವರೆ?'

'ಅದನ್ನು ನೀನೊಬ್ಬಳಲ್ಲದೆ ಮತ್ತೆ ನಂಬುವವರು ಯಾರು?'

'ನನ್ನ ಮಾಂಗಲ್ಯವನ್ನು ಪಣವಾಗಿಟ್ಟು ನಂಬಿಸುವೆನು!'

'ಬಿಡು. ನೀನು ಮಹಾರಾಣಿ. ನಿನಗೆ, ಲಂಕೇಶ್ವರಿಗೆ ಯಾರನ್ನು ನಂಬಿಸಿ ಆಗಬೇಕಾದುದೇನು?'

'ಸ್ವಾರ್ಥ ಸಾಧನೆಗೆ! ನನ್ನ ಮಾಂಗಲ್ಯವನ್ನು ರಕ್ಷಿಸಲು!'

'ನಿನಗೆ ಮಾಂಗಲ್ಯವುಯಾವಾಗಲೂ ಕೈಲಾಸದಂತೆ ಸುಸ್ಥಿರ!'

'ಕೈಲಾಸವೇ ನಿನ್ನಿಂದ ಅಲುಗಿತ್ತಲ್ಲವೆ?'

'ಹೌದು, ಅಲುಗಿತ್ತು!'

'ರಾಮನ ಅರ್ಧಾಂಗಿಯನ್ನು ನಾನೇ ಕಪ್ಪವಾಗಿ ಕೊಟ್ಟು ತಪ್ಪೊಪ್ಪಿಕೊಳ್ಳುತ್ತೇನೆ. ಕ್ಷಮಾ ಭಿಕ್ಷೆಯನ್ನು ಬೇಡುತ್ತೇನೆ!'

'ನಿನಗೆ ಆ ಶ್ರಮ ಬೇಡ. ಆ ಶಿಕ್ಷೆ ನನಗಿರಲಿ!'

'ಶಿಕ್ಷೆಯೆಂದು ತಿಳಿಯಬೇಡ.'

'ಶಿಕ್ಷೆಯಲ್ಲ, ತಿತಿಕ್ಷೆ (ತಾಳ್ಮೆ) ಮತ್ತು ವೀರದೀಕ್ಷೆ!'

'ದೇವಿಯನ್ನು ಕರೆದೊಯ್ಯುವುದಾದರೆ, ನಾನು ಜೊತೆಗೆ ಬರುತ್ತೇನೆ.'

'ಸೀತೆ ನನ್ನನ್ನು ಗೆದ್ದಳು. ಅದರಿಂದ ಅವಳಿಗೆ, ರಾಮನನ್ನು ಯುದ್ಧದಲ್ಲಿ ಗೆದ್ದು ತಂದು ಕಪ್ಪವಾಗಿ ಕೊಡುತ್ತೇನೆ!'

'ರಾಮನು ಅಪ್ರಾಕೃತ (ಸಾಮಾನ್ಯ ಮನುಷ್ಯ ಅಲ್ಲ.) ಅವನನ್ನು ಎದುರಿಸಲು ಮುಕ್ತಿಯಲ್ಲದೆ ಬೇರೆ ಜಯ ಉಂಟೆ?'

'ಯುದ್ಧದಲ್ಲಿ ಅವನನ್ನು ಸೋಲಿಸದೆ ನನಗೆ ಮುಕ್ತಿ ಲಭಿಸುತ್ತದೆಯೆ? ನನಗೆ ವರವನ್ನು ನೀಡಿದ ಮಹೇಶ್ವರಿಯ ನಾಲಗೆ ಸತ್ಯದ ತವರು. ಅದು ಎಂದೂ ಸುಳ್ಳಾಗದು!'

'ಸುಳ್ಳಾಗದಿದ್ದರೂ ಅದು ಅನಂತಮುಖಿ! ನಾವು ಒಂದು ಬಗೆಯಲ್ಲಿ ಆಶಿಸಿದರೆ ಅದು ಬೇರೊಂದು ರೀತಿಯಲ್ಲಿ ನಮ್ಮ ಊಹೆಗೆ ಹೊಂದಿಕೆಯಾಗದ ಹಾಗೆ ತನ್ನ ಇಚ್ಛೆಯನ್ನು ಕೈಗೂಡಿಸಿ ನಡೆಸುತ್ತದೆ.'

'ನೀನು ಪತಿವ್ರತೆ. ನಾನು ಅಮಂಗಳ ಮನೋರಥವನ್ನು ಬಿಟ್ಟು, ಶುಭ ಬುದ್ಧಿಯಿಂದ ಶುದ್ಧನಾಗಿದ್ದೇನೆ. ಜಗನ್ಮಾತೆ ವರವನ್ನು ನೀಡಿದ್ದಾಳೆ. ಇನ್ನೇಕೆ ಚಿಂತೆ? ನೋಡು, ಮೂಡಲ ದಿಕ್ಕಿನಲ್ಲಿ ಆಸೆಯ ರೀತಿ ಕೆಂಪು ಕಣ್ಣು ತೆರೆಯುತ್ತಿದೆ. ನಾನು ಇಂದು ಏಕಾಂಗಿಯಾಗಿ ಕಾಳಗಕ್ಕೆ ನಡೆಯುತ್ತೇನೆ. ನನ್ನ ಗುರಿ ಕೊಲ್ಲುವುದಲ್ಲ. ಸೀತೆಯ ಶುಭೋದಯಕ್ಕೆ ಗೆಲ್ಲುವುದಲ್ಲದೆ, ನನಗೆ ಗುರಿ ಕೊಲ್ಲುವುದಲ್ಲ.'

'ಈ ಹೃದಯ ಪರಿವರ್ತನೆಯು ವೈರಿಗೆ ತಿಳಿಯದು!'

'ತಿಳಿಯಬಾರದೆಂಬುದೆ ವೀರತೆಗೆ ದೀಕ್ಷೆ! ಅದನ್ನು ಹೇಳಿದರೆ ಯಾರೂ ನಂಬುವುದಿಲ್ಲ! ಮಹಾರಾಣಿಯೆ, ನನಗೆ ಅದನ್ನು ಹೇಳುವುದು ಹೇಡಿತನವೆನಿಸುತ್ತದೆಯೆ ಹೊರತು, ಬೇರೆ ಪ್ರಯೋಜನ ಕಾಣಿಸುತ್ತಿಲ್ಲ. ಈ ಪ್ರತಿಜ್ಞೆಯನ್ನು ಯಾರಿಗೂ ಹೇಳಬೇಡವೆಂದು ನಾನು ನಿನ್ನಲ್ಲಿ ಬೇಡಿಕೊಳ್ಳುತ್ತೇನೆ. ನನ್ನ ಈ ದಿವ್ಯ ರಹಸ್ಯವು ಹೃದಯ ಗುಹೆಯಲ್ಲಿ ಭವ್ಯ ಕೃತಿಯಾಗಿರಲಿ. ಈ ಪ್ರತಿಜ್ಞೆ ಕೈಗೂಡಿದರೆ ಅದು ಮೂರು ಲೋಕಕ್ಕು ತಿಳಿಯುತ್ತದೆ. ಅಲ್ಲದಿದ್ದರೆ ಹೋಗು, ಹೇಳಿದ ನೀನೆ ನಗೆಗೆ ಈಡಾಗುವೆ! ಆ ಅಣಕವನ್ನು ಮಾತ್ರ ನಾನು ಸಹಿಸಲಾರೆ! ಹೋಗು, ರಾಮನನ್ನು ಗೆದ್ದು ಸೆರೆಹಿಡಿದು ತರುವವರೆಗೂ ಸೀತೆಯನ್ನು ಸೇವಿಸುತ್ತಿರು!'

ಆ ನುಡಿ ಕೇಳಿ ಮನಸ್ಸು ತುಂಬಿ ಬಂದು ಮಂಡೋದರಿಯು ತಲೆಯನ್ನು ಅವನ ಅಡಿಗಳಲ್ಲಿಟ್ಟು ನಮಿಸಿದಳು. ಪತಿ ಚರಣ ಧೂಳನ್ನು ಶಿರದಲ್ಲಿ ಧರಿಸುತ್ತ,

'ನಿನ್ನ ಈ ಪವಿತ್ರತಮವಾದ ವಿಜಯಯಾತ್ರಾರಣಕ್ಕೆ ಗೆಲುವಾಗಲಿ.' ಎಂದು ಹೃದಯದಾಳದಿಂದ ಶುಭ ನುಡಿಯುತ್ತ, ಕಣ್ಣನಿಗಳು ಉರುಳುತ್ತಿರಲು ಲಂಕಾ ಮಹಾರಾಣಿಯು ತನ್ನ ಇನಿಯನನ್ನು ಬೀಳ್ಕೊಟ್ಟಳು!

* * *

ರಾಮರಾವಣರ ಮಹೋಗ್ರ ಸಂಗ್ರಾಮದಲ್ಲಿ ರಾವಣನ ಶೂಲದ ಆಘಾತಕ್ಕೆ ಮೂರ್ಛೆ ಹೋಗಿ... ವೀರ ರಾಮಚಂದ್ರನು ತೇರಿಗೆ ಒರಗಿದನು. ಅದನ್ನು ಕಂಡು ರಾವಣನು ಹಿಗ್ಗಿದನು. ಅವನನ್ನು ಹಿಡಿದು ತನ್ನ ರಥಕ್ಕೆ ಹೊತ್ತೊಯ್ಯುವ ಉತ್ಸಾಹದಲ್ಲಿ ಆನಂದದಿಂದ ಮುನ್ನುಗ್ಗಿದನು. ಕಾಳ್ಗಿಚ್ಚು ತನ್ನನ್ನು ತಡೆಯಲು ಬಂದ ಹುಲ್ಲಿಗೆ ಸಲ್ಲಿಸುವ ಮನ್ನಣೆಯಂತೆ ತನ್ನನ್ನು ತಡೆಯಲು ಬಂದ ಕಪಿವೀರರನ್ನು ಖಡ್ಗದಿಂದ ಹೊಡೆದು ಉರುಳಿಸಿದನು.

ರಾಮನನ್ನೇ ಗುರಿ ಮಾಡಿಕೊಂಡು ಧಾವಿಸುತ್ತಿರುವಾಗ, ತನ್ನ ಮೇಲೆ ಎರಗಿ ಬರುತ್ತಿದ್ದ ಬ್ರಹ್ಮಾಸ್ತ್ರವನ್ನು ರಾಕ್ಷಸನು ನೋಡಿದನು. ಕೋಪಗೊಂಡನು. ಅದನ್ನು ಹಿಡಿದು ನೆಲಕ್ಕೆ ಎಸೆಯುವೆನು ಎಂಬ ದೃಢ ಹಠದಿಂದ ಆ ಮಹಾ ಬ್ರಹ್ಮ ಬಾಣವನ್ನು ಮತ್ತು ಜಾನಕಿ ಪ್ರಿಯನ ಪ್ರಾಣವನ್ನು ಹಿಡಿದನು!

ಹಿಡಿದುದೆ ತಡ ಆ ಬಾಣವು ರಾಕ್ಷಸನ ದೈತ್ಯ ಬಲವನ್ನು ಕಡೆಗಣಿಸಿ, ಅವನ ಹೃದಯವನ್ನು ಪ್ರವೇಶಿಸಿತು. ಆ ಅಸ್ತ್ರದ ಕಾಂತಿಗೆ ಅವನ ಹೃದಯ

ಗವಿಯ ಗೂಬೆಗತ್ತಲು ಹೊರಹೊಮ್ಮಿ ಲೋಕತ್ರಯವನ್ನು ತುಂಬಿತು. ಧರೆಯನ್ನು ಅಮಾವಾಸ್ಯೆಯ ಕತ್ತಲಂತೆ ಆಕ್ರಮಿಸಿತು! ರಾವಣನು ಅದು ಎದೆಯನ್ನೊಡೆದು ಬೆನ್ನಿನಿಂದ ಹೊರಹೊಮ್ಮಿ ಹೋಗದಂತೆ ಭದ್ರಮುಷ್ಟಿಯಿಂದ ಹುಬ್ಬುಗಂಟಿಕ್ಕಿ ಹಿಡಿದಿದ್ದನು. ಅವನಿಗೆ ಅದರಲ್ಲಿ ರಾಮನ ಆಕೃತಿ ಕಂಡಿತು.

'ಸಿಕ್ಕಿದನಲಾ ಶತ್ರು!' ಎಂದು ಕೂಗುತ್ತ ಹಿಂತಿರುಗಿ ಉನ್ಮತ್ತನಂತೆ ತನ್ನ ತೇರಿಗೆ ನೆಗೆದನು. ಸಾರಥಿಗೆ ಕೂಗುತ್ತ ಆಜ್ಞೆ ಮಾಡಿದನು:

'ವೈರಿ ಸೆರೆಸಿಕ್ಕಿದ್ದಾನೆ! ರಥವನ್ನು ಪುರಕ್ಕೆ ಹಿಂತಿರುಗಿಸು.'

ಎದೆಯನ್ನು ಹೊಕ್ಕ ಬಾಣದ ಅರ್ಧವನ್ನು ಹಿಡಿದು ರಕ್ತಮಯನಾದ ಮಯನಂದನಾ ಪ್ರಿಯನನ್ನು ನೋಡಿದ ಸಾರಥಿಯು ತನ್ನ ದೊರೆಯ ಮತಿಯು ವಿಕಲವಾಯಿತೆಂದುಕೊಂಡನು. ಕೂಡಲೇ ರಥವನ್ನು ನಗರದ ಕಡೆಗೆ ತಿರುಗಿಸಿದನು!

ಪುಣ್ಯ ಹೃದಯದ ಅಮೃತದ ಸಂಗವನ್ನು ಬಯಸಿದ ಬ್ರಹ್ಮಾಸ್ತ್ರವು ರಾವಣನ ಹೃದಯದಲ್ಲಿ ಮುಳುಗಿತು. ಅವನ ಪ್ರಾಣವೆಂಬ ಅಮೃತವನ್ನು ಹೀರಿತು. ರಾವಣನು ಬಾಣವನ್ನು ಎಡಗೈಯಿಂದ ಹಿಡಿದು, ರಕ್ತ ಸುರಿಯುತ್ತಿರಲು ಘೋರವಾಗಿ ಕಾಣುತ್ತಿದ್ದನು. ಮತಿ ವಿಕಾರದಿಂದ ಭ್ರಾಂತಿಗೊಳಗಾಗಿದ್ದನು. ಸಾರಥಿಯು ಅತಿ ದುಃಖಿತನಾಗಿ ಕಳವಳಗೊಂಡನು. ಅವನು ಏಕಾಂಗಿಯಾಗಿ ಕುದುರೆಗಳಿಗೆ ನಾಲಗೆ ಜೋಲುವಂತಹ ವೇಗದಿಂದ ರಥವನ್ನು ನಡೆಸಿ ದೈತ್ಯೇಂದ್ರನನ್ನು ಅರಮನೆಗೆ ತಂದನು.

ಲಂಕೆಯಲ್ಲಿ ಕಳವಳ ಹಬ್ಬಿತು. ಪರಿಜನಕ್ಕೆ ಭೀತಿ ತಬ್ಬಿತು. ವೈದ್ಯರು ಹೃದಯದಲ್ಲಿ ನಾಟಿದ್ದ ಅಸ್ತ್ರವನ್ನು ತೆಗೆಯುವ ಬಗೆ ತಿಳಿಯದೆ ಚಿಂತೆಗೊಳಗಾದರು. ಮೂರ್ಛಿತ ಮಹಾರಾಜನನ್ನು ತೇರಿನಿಂದ ಪಲ್ಲಕ್ಕಿಗೆ ಇಳಿಸಿದರು. ಅನಂತರ ಮಲಗು ಮಂಚಕ್ಕೆ ಮಹಾರಾಣಿ ಮಂಡೋದರಿಯ ಧೈರ್ಯ ಸನ್ನಿಧಿಗೆ ಮೆಲ್ಲನೆ ಒಯ್ದರು. ಪ್ರಿಯನ ನೆತ್ತರು ಸೋರುವ ಶರೀರದ ರಣರುದ್ರ ಭಂಗಿಯನ್ನು, ಬ್ರಹ್ಮಶರ ಹೊಕ್ಕದ್ದನ್ನು ನೋಡಿದಳು.

'ಹಾ ಸ್ವಾಮಿ, ಪ್ರತಿಜ್ಞೆ ನೆರವೇರಿತೆ? ಸೆರೆ ಹಿಡಿದು ತಂದ ಮೈಥಿಲಿನಾಥನನ್ನು ತೋರಿಸು. ನನಗೆ ತೋರಿಸು.' ಎಂದು ನಿಟ್ಟುಸಿರು ಬಿಡುತ್ತ, ಅಳುತ್ತ ದಶಕಂಠನ ಅರ್ಧಾಂಗಿಯು ಶೈತ್ಯೋಪಚಾರವನ್ನು ಮಾಡಿದಳು. ಮಂತ್ರ ಶುಶ್ರೂಷೆಯನ್ನು, ಶಸ್ತ್ರ ಶಾಸ್ತ್ರ ಚಿಕಿತ್ಸೆ ಮಾಡಲು ಅಪ್ಪಣೆ ನೀಡಿದಳು.

ರಾವಣನಿಗೆ ಆಗ ನಿಧಾನವಾಗಿ ಪ್ರಜ್ಞೆ ಮರಳಿತು. ಪಕ್ಕಕ್ಕೆ ಹೊರಳಿದನು. ನೋವಿನಿಂದಾಗಿ ನರಳಿದನು. ಕಣ್ತೆರೆದು ನೋಡಿದನು. ಮರವೆಯಿಂದ ಸ್ಮೃತಿಯು ಜಾಗೃತಿಗೆ ಬಂದನು. ಮುಖದಲ್ಲಿ ಶಾಂತಿ ನೆಲೆಸಿತು. ಕಣ್ಣಿನ ಕಾಂತಿಯು ಸಂತೋಷ ಚಿತ್ತವನ್ನು ಕನ್ನಡಿಸಿತು. ಹೆಮ್ಮೆಯ ನಗೆಯ ಮೊಗ್ಗು ತುಟಿಯಲ್ಲಿ ಅರಳಿತು. ಪ್ರಿಯೆಯ ಮುಖ ನೋಡಿ.

'ರಾಣಿಯೇ ಪುರವನಿತೆಯನ್ನು ಹೊಸ ತಳಿರು ತೋರಣಗಳಿಂದ ಸಿಂಗರಿಸಲು ಹೇಳು! ಶುಭದ ವಾರ್ತೆಯನ್ನು ಮಂಗಳ ವಾದ್ಯಗಳು ಘೋಷಿಸಲಿ. ಮಹಾರಾವಣ ವಿಜಯ ಕಥಾ ಕಾವ್ಯವನ್ನು ಲಂಕಾ ಲತಾಂಗಿಯರು ಹಾಡಲಿ! ನಾನು ರಾಮನನ್ನು ಗೆದ್ದಿದ್ದೇನೆ! ಸೆರೆ ಹಿಡಿದು ತಂದಿದ್ದೇನೆ!'

ಎಂದು ಒಂದಿಷ್ಟು ಸಂಶಯವಿಲ್ಲದಂತೆ ರಾವಣನು ಹೇಳಿದನು. ಸುತ್ತಲೂ ದೃಷ್ಟಿ ಹರಿಸಿದನು. ತಮ್ಮ ಕಟ್ಟೇಕಾಂತವನ್ನು ನೋಡಿ ಮನದ ನಿಶ್ಚಯವನ್ನು ಹೀಗೆ ಮುಂದುವರಿಸಿ ಹೇಳಿದನು:

'ನೋಡಿಲ್ಲಿ! ಲೋಕೈಕ ವೀರನನ್ನು ನನ್ನ ಭದ್ರಮುಷ್ಟಿಯಲ್ಲಿ ಹೇಗೆ ಹಿಡಿದಿದ್ದೇನೆ! ಈ ಕಪ್ಪವನ್ನು ತೆಗೆದುಕೊ. ಮಾತೆ ಸೀತೆಗೆ ಕಾಣಿಕೆಯಾಗಿ ಕೊಡು. ಆಗ – ನಿನಗೆ ಸೋತವನು, ತಾನೆಯೆ ನಿನಗೆ ಸೋತು; ನೀನು ಯಾರಿಗಾಗಿ ಸೋತಿದ್ದೆಯೊ ಅವನನ್ನು ಗೆದ್ದು ನಿನಗೆ ಒಪ್ಪಿಸಿದ್ದಾನೆ. ತಪ್ಪನ್ನು ಕ್ಷಮಿಸು – ಎಂದು ಹೇಳು.'

'ಮಹಾಮತಿಯೆ, ನೀನು ಹಿಡಿದಿರುವುದು ಬಾಣದ ಗರಿ. ರಘೋತ್ತಮನ ಶರೀರವೆಂಬ ಭ್ರಾಂತಿಯಿಂದ, ಸುಮ್ಮನೆ ಕಿತ್ತೆಸೆಯಲು ಅರ್ಹವಾದುದನ್ನು ಹೀಗೆ ಬಿಗಿದು ಅಪ್ಪಿಕೊಂಡು ತಪ್ಪು ಮಾಡುತ್ತಿರುವೆ.'

ಎಂದು ಅಳುತ್ತ ಹೇಳಿದ ಮಯಸುತೆಗೆ ರಾವಣನು ಹುಬ್ಬುಗಂಟಿಕ್ಕಿ ಹೇಳಿದನು:

'ಹೆಣ್ಣೆ, ಭ್ರಾಂತಿ ಯಾರಿಗೆ? ನಿನಗೊ ನನಗೊ? ರಾಮನನ್ನು ಪ್ರಾಣರೂಪದಿಂದ ಇಲ್ಲಿ ಪೂರ್ಣವಾಗಿ ಹಿಡಿದಿದ್ದೇನೆ. ಅಲ್ಲಿ ರಾಮನ ಕಳೆಬರಕ್ಕೆ ವೈದ್ಯರು ಔಷಧೋಪಚಾರ ನಡೆಸುತ್ತಿರಲು ವಾನರರು ಗೋಳಿಡುತ್ತಿದ್ದಾರೆ. ನೀನು ಪತಿವ್ರತೆಯಾದರೆ ನಾನು ಹೇಳಿದಂತೆ ಮಾಡು! ನೀನು ಇದನ್ನು ನನ್ನ ಎದೆಯಿಂದ ಎಳೆದು ತೆಗೆ. ಸೀತೆ ಮತ್ತು ನೀನಲ್ಲದೆ ಅನ್ಯರಿಗೆ ಈ ರಾಮನ ಮಹಾನ್ ಶರ ಶರೀರವನ್ನು ಸ್ಪರ್ಶಿಸಲು ಸಾಧ್ಯವಿಲ್ಲ.'

ಪತಿಯ ಆಜ್ಞೆಗೆ ಪ್ರತಿ ನುಡಿಯಲಾರದೆ ಪತಿವ್ರತೆಯು ಮಹಾಸ್ತ್ರವನ್ನು ಇನಿಯನ ಮುಷ್ಟಿಯಿಂದ ಸಡಿಲಿಸಿದಳು. ಬಾಣದ ತುದಿಯನ್ನು ಬಲವಾಗಿ ಹಿಡಿದಳು. ಕಿತ್ತು ಎಳೆದು ಎತ್ತಿದಳು. ರಕ್ತದ ಹೊನಲು ಓಕುಳಿಯ ಬುಗ್ಗೆಯಂತೆ ಚಿಮ್ಮಿ ಹರಿದುದನ್ನು ಕಂಡು ಎಚ್ಚರ ತಪ್ಪಿದಂತೆ ನಡುಗಿದಳು. 'ಹಾಹಾ, ಅಯ್ಯೊ ಕೆಟ್ಟೆನು. ಕೊಂದೆನು.' ಎಂದು ರೋದಿಸಿದಳು.

ರಾವಣನು ಮುಷ್ಟಿಯನ್ನು ಬಿಟ್ಟ ತಕ್ಷಣ, ಅವನ ಎದೆಯಿಂದ ಹೊರಕ್ಕೆ ಬಂದುದೇ ತಡ ಆ ಬ್ರಹ್ಮ ಬಾಣವು ಅವನ ಪ್ರಾಣವನ್ನು ಹೀರಿತು. ರಾಮನ ಆತ್ಮದಲ್ಲಿ ಮೋಕ್ಷವನ್ನು ಪಡೆಯಿತು!

ಮಂಡೋದರಿಯು ತನ್ನ ಸ್ವಾಮಿಯ ಕಳೆಬರದ ಪಾದದೆಡೆ ಇಚ್ಛಾಮರಣಿಯಾಗಿ ನಿಷ್ಪಂದ ನೀರವ ಶಿಲಾ ಪ್ರತಿಮೆಯಂತೆ ಉರುಳಿಬಿದ್ದಳು.



6

# ಮಹಾಪಾರ್ಶ್ವ

ಆಂಜನೇಯನು ರಾತ್ರಿಯಲ್ಲಿ ಅಗೋಚರನಾಗಿ ಲಂಕೆಯನ್ನು ಪ್ರವೇಶಿಸಿದನು. ಸೀತೆಯನ್ನು ಅರಸುತ್ತ ಮನೆ ಮನೆಗಳನ್ನು ಹೊಕ್ಕು ನೋಡಿದನು. ಲಂಕಾ ಪ್ರಮುಖರ ಗುಣಲಕ್ಷಣಗಳನ್ನು ಅರಿತನು. ಸೇನಾನಿ ಮಹಾಪಾರ್ಶ್ವನ ಸುಧಾಶ್ವೇತ ಸೌಧವನ್ನು ಪ್ರವೇಶಿಸಿದನು. ಒಂದು ಅಸ್ತ್ರ ಶಕ್ತಿಯನ್ನು ಮಂತ್ರದಿಂದ ಪೂಜಿಸಿ ಆ ಸೇನಾನಿ ಸಾಧನಾ ಪಥದಲ್ಲಿದ್ದುದನ್ನು ಕಂಡನು. ಗೌರವ ಭಾವಕ್ಕೆ ಒಳಗಾದನು.

ಲಂಕೇಶ್ವರ ರಾವಣನು ಸಮುದ್ರದ ಎಡಬದಿಯಲ್ಲಿ ಕಪಿಧ್ವಜ ರಾಮಸೇನೆಯು ಬೀಡುಬಿಟ್ಟಿರುವುದನ್ನು ಬೇಹುಗಾರರಿಂದ ತಿಳಿದನು. ಅವನು ಹೆಣ್ಣೋರ್ವಳ ತಿರಸ್ಕಾರದಿಂದ ನಾಚಿ, ಪೌರುಷ ಅಡಗಿದವನಾಗಿದ್ದನು. ಭಗ್ನಾಶೆಯಿಂದ ಅವನ ಮುಖ ಕರ್ಕಶವಾಗಿತ್ತು. ಅವನು ವಾನರ ಸೇನೆಯನ್ನು ಎದುರಿಸಲು ರಾಕ್ಷಸ ಪ್ರಮುಖರ, ಸಚಿವ ಶ್ರೇಷ್ಠರ, ಸೇನಾ ಪ್ರಮುಖರ ಮತ್ತು ಸತ್‌ಪ್ರಜೆಗಳ ಸಭೆ ಕರೆದನು. ಅವರನ್ನುದ್ದೇಶಿಸಿ ಮಾತನಾಡಿ, ಮುಂದಿನ ಉಪಾಯವನ್ನು ಆಲೋಚಿಸಿ ಎಂದು ಹೇಳಿದನು.

ಭಾರೀ ಗಾತ್ರದ ಪ್ರಥಮ ಸೇನಾನಿ ಪ್ರಹಸ್ತನು ವೈರಿಗಳನ್ನು ಎದುರಿಸಲು ತಾನು ಮತ್ತು ಸೈನ್ಯ ಸಿದ್ಧರಿರುವುದಾಗಿ ಶೌರ್ಯದ ನುಡಿಗಳನ್ನು ಆಡಿದನು. ಅವನ ನುಡಿಗೆ ಸಭೆಯಲ್ಲಿ ಅಟ್ಟಹಾಸದ ನಗೆ ಹೊಮ್ಮಿತು. ದಾನವೇಂದ್ರನ

ಮುಖದ ಮೇಲೆ ಸಂತೃಪ್ತಿ ಸೂಚಕ ನಗೆ ಹೊಮ್ಮಿತು. ಹೆಮ್ಮೆಯಿಂದ ಸಭೆಯನ್ನು ನೋಡುತ್ತ ಅವನ ನೋಟದ ನವಿಲು ತನ್ನ ಕಣ್ಣು ಕಣ್ಣಿನ ವಿಜಯದ ನವಿಲುಗರಿ ಬಿಚ್ಚಿ ಕುಣಿಯಿತು. ಇದ್ದಕ್ಕಿದ್ದಂತೆ ಸದ್ದು ಅಡಗಿತು. ನೋಡುತ್ತಿದ್ದ ಹಾಗೆ ಮತ್ತೋರ್ವನು – ಮಹತ್ ಶಿಖರ ಭವ್ಯಗಿರಿಯು ಸಮುದ್ರದಿಂದ ಏಳುವಂತೆ ಎದ್ದನು. ಹಾಗೆ ಎದ್ದವನು ದೈತ್ಯ ದಳಪತಿ ಮಹಾಪಾರ್ಶ್ವ.

ಅವನ ಭುಜಗಳು ಪರ್ವತದಂತಿದ್ದವು. ಅವನ ಸಿಂಹ ಸದೃಶವಾದ ವಿಶಾಲ ಧೈರ್ಯದ ವಕ್ಷಸ್ಥಳದಲ್ಲಿ ಭೀತಿಯಿಲ್ಲದ ಭರವಸೆಯ ಓಲಗ ನಡೆಯುತ್ತಿತ್ತು. ಅವನ ಹಣೆಯಲ್ಲಿ ಶಕ್ತಿಪೂಜೆಯ ಉಗ್ರ ತ್ರಿಶೂಲ ಚಿಹ್ನೆ ಮೂರನೆಯ ಕಣ್ಣಿನಂತೆ ಪ್ರಕಾಶಿಸುತ್ತಿತ್ತು. ಅವನ ಮುಖನೇತ್ರಗಳಲ್ಲಿ ಸಾಧನಾ ತೇಜಸ್ಸು ಬೆಳಗುತ್ತಿತ್ತು. ದಶಗ್ರೀವನನ್ನೂ ಒಳಗೊಂಡು ಆ ಮಹಾಸಭೆಯು ಗೌರವದಿಂದ ನಿಶ್ಶಬ್ದವಾಗಿದ್ದು, ಕಣ್ಣರಳಿಸಿ ಅವನ ನುಡಿಗೆ ಕಿವಿಯೊಡ್ಡಿತು. ಮಂತ್ರಸಂಗ್ರಾಮ ವಿದ್ಯೆಯ ಪರಮಗುರು ಮಹಾಪಾರ್ಶ್ವನು ನಿಧಾನವಾಗಿ ಗಂಭೀರ ವಾಣಿಯಲ್ಲಿ,

'ನಾನು ಇಲ್ಲಿ ಹೊಸತಾದುದನ್ನು ಹೇಳಲು ನಿಂತಿಲ್ಲ. ನೀವು ಪ್ರಹಸ್ತೇಂದ್ರನಿಂದ ನಮ್ಮ ಅಪಾರ ಸೈನ್ಯದ ಪ್ರಶಂಸೆ ಕೇಳಿರುವಿರಿ. ಆ ಹೊಗಳಿಕೆಗೆ ಗೌರವವನ್ನು ಸೂಚಿಸುತ್ತೇನೆ.' ಎಂದು ಹೇಳುತ್ತ ಪ್ರತಿಯೊಬ್ಬರನ್ನು ದಿಟ್ಟಿಸಿ ನೋಡುತ್ತ ಸಭಾ ವಿಸ್ತಾರವನ್ನು ಗಮನಿಸಿದನು. ಅಭಿಮಾನದಿಂದ ತನ್ನ ಮಾತುಗಳನ್ನು ಮುಂದುವರಿಸಿದನು.

'ಇಂತಹ ಘನ ಸಮರ್ಥರಿರುವ ಈ ಸಭೆಯಲ್ಲಿ ಭಿನ್ನ ಭಾವಕ್ಕೆ ಎಡೆಯಿರುವುದೆ? ಇಲ್ಲಿ ನೆರೆದಿರುವ ವೀರರ ಎದುರು ನಿರಾಶೆ ನಾಚುವುದಿಲ್ಲವೆ? ಭಯವಿಲ್ಲಿ ತಲೆ ಇಣುಕಲು ಸಾಧ್ಯವೆ? ಶಂಕೆಯೆಂಬುದು ಬಾಲ ಮುದುರಿಕೊಂಡು ನಾಯಿಯಂತೆ ಓಡದೆ ನಿಲ್ಲಲು ಸಾಧ್ಯವೆ? ಹೆಸರಪಟ್ಟಿಯೆ ಸಾಕು ವೈರಿಯ ಹೃದಯದ ಸತ್ತ್ವ ಗುಂದಿಸಲು. ಯುವರಾಜ ಇಂದ್ರಜಿತುವಿನ ಹೆಸರು ಕೇಳುವುದರಿಂದಲೇ ದಿಗ್ಗಜಗಳ ಕಿವಿಗಳು ನಡುಗುವುದಿಲ್ಲವೆ? ಓ, ಆ ಓರ್ವ ಮಹಾಬಲಶಾಲಿ ಮಹಾ ಕುಂಭಕರ್ಣ ಇಲ್ಲಿಲ್ಲ! ಅವನ ಸಾಮರ್ಥ್ಯವನ್ನು ಹೊಗಳಿದರೆ ಮುಖಸ್ತುತಿಯಾಗುವುದಿಲ್ಲ. ಅವನು ಪುಲಸ್ತ್ಯ ಮಿಶ್ರವಸು ಕೈಕಸಿಯರ ಎರಡನೆಯ ಮಗ. ಜನ್ಮ ಮಾತ್ರದಿಂದ ಎರಡನೆಯವನು. ಸಹಜವಾಗಿ ಪರ್ವತಾದ್ಭುತನು. ಅವನು ವಿಕ್ರಿಯಾಬಲ (ಬೇಕಾದ ರೂಪ, ಆಕಾರ ಮುಂತಾದುವನ್ನು ತಾಳುವ ಶಕ್ತಿ)ದಿಂದ ಬೆಳೆದು ವಿಜೃಂಭಿಸಿ ನಡೆದರೆ, ಹಿಮಾಚಲ ಒಂದು ಕಡೆ ವಿಂಧ್ಯಪರ್ವತ ಇನ್ನೊಂದು ಕಡೆ ತೂಗಿ ತೊನೆಯುವುವು! ಮಲೆತು ಗದೆ ಬೀಸಿದರೆ ಯಮನ ಅಳ್ಳೆ (ಪಕ್ಕೆ) ನಡುಗಿ ಏದುಸಿರು ಬಿಡುವನು! ಇಂದ್ರನ ವಜ್ರಾಘಾತವನ್ನು ಸಹಿಸಿಕೊಂಡು, ಐರಾವತದ ದಂತವೊಂದನ್ನು ತಿರುಚಿ ಕಿತ್ತು, ಗದೆಯಾಗಿಸಿಕೊಂಡು ಹೊಡೆದಟ್ಟಿದನು! ಅವನಿಗೆ ಬ್ರಹ್ಮನಿಂದ ನಿದ್ರಾಶಾಪವಾಯಿತು. ಇಲ್ಲದಿದ್ದರೆ ನಮ್ಮ ರಾಷ್ಟ್ರ ರಕ್ಷಣೆಗೆ ಈ ಸಭೆಗಳೇತಕ್ಕೆ? ಸೇನೆ ಏತಕ್ಕೆ? ಆದರೂ ಅವನೊಬ್ಬನ ನಿದ್ದೆ ನಮ್ಮೆಲ್ಲರ ಎಚ್ಚರಿಕೆಗಿಂತ ಮಿಗಿಲಾದುದು. ಮದ್ದಿನ ಮನೆಯ

ನಿದ್ರೆಯನ್ನು ಕೆಡಿಸಲು ಒಂದು ಕಿಡಿಸಾಲದೆ? ಅಂತಹವರೆಲ್ಲರು ಇರುವ ನಮ್ಮ ಲಂಕೆ ಯಾರಿಗಾದರೂ ದುಸ್ಸಾಧ್ಯವಾದುದು ಎಂಬುದು ನಿಜ.

'ಈ ಸೂರ್ಯಶತ್ರು, ಶೋಣಿತಾಕ್ಷ, ಅಕಂಪನ, ವಜ್ರಹನು, ಮಕರಾಕ್ಷ, ರಾಹುರೋಷರು ಮಹಾಶೂರರು. ಸಪ್ತಘ್ನ, ರಶ್ಮಿಕೇತು, ಧೂಮ್ರಾಕ್ಷ, ಅಗ್ನಿಕೇತು, ವಿದ್ಯುನ್ಮಾಲಿ, ವಿದ್ಯುಜ್ಜಿಹ್ವರು ದೇವಾಂತಕರು. ಆ ದುರ್ಮುಖನ ಮರೆಯಲ್ಲಿರುವ ವಜ್ರದಂಷ್ಟ್ರ; ದೂರದಲ್ಲಿದ್ದರೂ ಬಳಿಯಲ್ಲಿಯೇ ಬಂದಂತಿರುವ ಮಹೋದರ; ಆ ಕಡೆ ಶಾರ್ದೂಲ ಶುಕ ಸಾರಣರು; ಮತ್ತೂ ಆ ಕಡೆ ಬ್ರಹ್ಮಾಕ್ಷ, ಯಜ್ಞಹ ಮುಂತಾದ ಇಲ್ಲಿ ಸೇರಿರುವ ಪ್ರತಿಯೊಬ್ಬರು ಭೀಮ ಪರಾಕ್ರಮಿಗಳು.

'ಈ ಕಡೆ ಕುಳಿತ ಎಲ್ಲರಿಗೂ ಮಿಗಿಲಾಗಿರುವವನ ಹೆಸರು ಹೇಳುವುದು ಪುಣ್ಯ, ಹಾಗೆಯೆ ಕೇಳಿದರೂ ಪುಣ್ಯ. ಹಾಗಾಗಿ ಹೇಳುತ್ತೇನೆಯೆ ಹೊರತು ನಿಮಗೆ ಗೊತ್ತಿಲ್ಲ ಎಂದು ತಿಳಿಸಿದರೆ ದಡ್ಡನಾಗುತ್ತೇನೆ. ಅವನು ಪೌಲಸ್ತ್ಯ ವೈಶ್ರವಣ ಮತ್ತು ಕೈಕಸಿಯರ ಮೂರನೆಯ ಮಗ ವಿಭೀಷಣ. ನಮ್ಮ ಲಂಕೆಗೆ ಧರ್ಮರಕ್ಷೆಯಾಗಿರುವವನು!'

ಹಾಗೆ ಹೇಳುತ್ತಿದ್ದಂತೆ ಸಭೆ ಉಘೇ, ಉಘೇ ಎಂದು ಹರ್ಷೋಲ್ಲಾಸದಿಂದ ಉದ್ಘರಿಸಿತು. ಅದನ್ನು ಕೈಸನ್ನೆಯಿಂದ ಸಂತಯಿಸುತ್ತ ಮಾತು ಮುಂದುವರಿಸಿದನು,

'ವೈರಿಯ ಎದೆಯನ್ನು ಪೊಳ್ಳಾಗಿಸಲು ಈ ಹೆಸರಪಟ್ಟಿಯೆ ಸಾಕಲ್ಲವೆ? ಆದರೂ ನಿಮಗೊಂದು ಆಶ್ಚರ್ಯವನ್ನು ತಿಳಿಸುವೆ. ಪ್ರಹಸ್ತನು ಹೇಳಿರುವುದರಿಂದ ಅದನ್ನು ಮತ್ತೆ ನಾನು ಪ್ರಸ್ತಾಪಿಸುವುದಿಲ್ಲ. ಈ ವಿಶ್ವವಿಜಿಗೀಷು (ವಿಶ್ವವನ್ನು ಗೆಲ್ಲಬೇಕೆಂಬ ಬಯಕೆಯುಳ್ಳವನು) ದಾನವೇಂದ್ರನು ನನಗಿಂತ, ಪ್ರಹಸ್ತನಿಗಿಂತ ಮತ್ತು ಇಲ್ಲಿ ಶೋಭಿಸುತ್ತಿರುವ ಶೂರರೆಲ್ಲರಿಗಿಂತ ಕಡಿಮೆಯವನಲ್ಲ. ಹಾಗಿದ್ದರೂ ವೈರಿ ಶಕ್ತಿಯನ್ನು ಗೌರವಿಸಿ ವಿನಯದಿಂದ ಶಂಕೆಯಿಂದ ಮಾತನಾಡಿದ್ದು ಏತಕ್ಕೆ?

'ನೀವೆಲ್ಲರೂ ಚೆನ್ನಾಗಿ ಆಲೋಚಿಸಿ. ನೀರಿನ ಮೇಲೆ ಕಾಣುವ ಹಡಗಿನ ಭಾಗವನ್ನು ಬಣ್ಣಿಸಿದರೆ ಆಯಿತೆ? ಕಣ್ಣಿಗೆ ಕಾಣದೆಯೆ ನೀರಿನ ಅಡಿಯಲ್ಲಿ ಕಿರಿದಾದ ಬಿರುಕಿದ್ದರೆ ಅಷ್ಟೇ ಸಾಕಲ್ಲವೆ ಬೃಹತ್ ನೌಕೆಯನ್ನು ಮುಳುಗಿಸಲು?

'ಸುರಕ್ಷಿತವಾಗಿ ಯಾತ್ರೆಯನ್ನು ಮಾಡಬೇಕೆನ್ನುವವರು ಅಂತರಂಗದ ರಂಧ್ರದೋಷಕ್ಕೆ ಕಣ್ಣನ್ನು ಮುಚ್ಚಿಕೊಂಡಿರಬಾರದು. ನಮ್ಮ ದೊರೆಯ ಕಣ್ಣಿಗೆ ಆ ಸರ್ವ ವಿನಾಶ ರಂಧ್ರವು ಕಾಣುತ್ತಿದೆ. ಅಲ್ಲಿಗೆ ಬರಿಯ ಸಾಹಸ ಸಾಲದು. ಧರ್ಮ ದೇವತೆಯ ಕೋಪವನ್ನು ಪ್ರತಿಭಟಿಸಿ ಯಾರೂ ಗೆಲ್ಲಲಾರರು! ಸಾಕ್ಷಿ ಬೇಕಿದ್ದರೆ, ಮಹಾದ್ವಾರದಲ್ಲಿ ಮುಖ ತಿರುಗಿಸಿ ನಿಂತಿರುವ ನಮ್ಮ ನಗರ ಲಕ್ಷ್ಮಿಯ ಕೈಯ ತ್ರಿಶೂಲ ಕೊಂಕಿರುವುದನ್ನು ನೋಡಿ ಬನ್ನಿ!'

ಸಭೆಯು ಮಹಾಪಾರ್ಶ್ವನ ಮಾತಿನ ಇಂಗಿತವನ್ನು ಅರಿತು ನಿಶ್ಶಬ್ದವಾಯಿತು. ರಾವಣನು ಅದನ್ನು ಕಣ್ಣರಳಿಸಿ ನೋಡಿ ಗಂಭೀರ ಮುಖ ಮುದ್ರೆ ತಾಳಿ ನಿಟ್ಟುಸಿರುಬಿಟ್ಟನು. ತನ್ನೊಳಗೆ ತಾನು ಒಳಹೊಗುವವನಂತೆ ಕಣ್ಣೆವೆಯನ್ನು ಮುಚ್ಚಿಕೊಂಡನು. ಪ್ರಿಯವಲ್ಲದಿದ್ದರೂ ಸತ್ಯವನ್ನು ಹೇಳಿದ ಕಟು ತೃಪ್ತಿಯಿಂದ

ಮಹಾಪಾರ್ಶ್ವನು ಅಮೃತವನ್ನು ಕಡೆದುಕೊಟ್ಟ ಬಳಿಕ ವಿಶ್ರಮಿಸಲೆಂದು ದಡಸೇರಿದ ಮಂದರ ಪರ್ವತದಂತೆ ಸುಮ್ಮನಾದನು.

ಅನಂತರ ಪ್ರಹಸ್ತನ ತಮ್ಮ ಅಕಂಪನ ರಾಜನ ಇಚ್ಛೆ ಪೂರೈಸುವುದೇ ಕರ್ತವ್ಯ ಎಂದು ಹೇಳಿದನು. ಕವಿಮನದ ಹಿರಣ್ಯಕೇಶಿ ಯುದ್ಧಕ್ಕಿಂತ ಶಾಂತಿಮುಖ್ಯವೆಂದು ತಿಳಿಸಿದನು. ಮೇಘನಾದನು ದೊರೆಗೆ ಬೇಕಾದದ್ದು ನಮ್ಮ ಪ್ರಾಣ, ಧರ್ಮಬೋಧೆಯಲ್ಲ ಎಂದು ಹೇಳಿ, ತಂದೆಗೆ ತನ್ನ ವಿಧೇಯತೆಯನ್ನು ಪ್ರಕಟಪಡಿಸಿದನು. ಅವನ ಪರಾಕ್ರಮದ ಸಿಡಿಲನುಡಿಗಳಾದ ಮೇಲೆ ಶಾಂತಚಿತ್ತದ ವಿಭೀಷಣನು ಶ್ರೀರಾಮನ ಸತಿ ಪತಿವ್ರತಾ ಶಿರೋಮಣಿ ಸೀತಾದೇವಿಯ ತಾಪದ ಶಾಪ ವಿಧಿಗಿಂತ ಕ್ರೂರವಾದುದು. ಆ ಪಾಪಕಾರ್ಯ ನಿಲ್ಲಲಿ. ಅನಂತರ ಕಪಿಸೈನ್ಯ ಎದುರಿಸೋಣ ಎಂದು ಸ್ಪಷ್ಟವಾಗಿ ಹೇಳಿದನು. ಅದು ಮಹಾಪಾರ್ಶ್ವನ ಸೂಚ್ಯ ಅಭಿಪ್ರಾಯಕ್ಕೆ ಪೋಷಕವಾಗಿತ್ತು. ಅದನ್ನು ಕೇಳಿ ಸುರವೈರಿ ರಾವಣನ ಮುಖ ಕಳೆಗುಂದಿತು. ಸಿಂಹಾಸನದಿಂದ ತಟಕ್ಕನೆದ್ದು ಆಯಾಸಗೊಂಡು ಹೊರಹೋದನು. ವಿಭೀಷಣನು ಸಭೆಯನ್ನು ವಿಸರ್ಜಿಸಿದನು.

* * *

ರಾವಣನು ಗೂಢಚಾರ ಸಾರಣನಿಂದ ರಾಮನಿಗೆ ವಿಭೀಷಣನ ಸ್ನೇಹ ದೊರೆತಿರುವುದನ್ನು ತಿಳಿದನು. ಪ್ರತೀಕಾರದಿಂದ ಹುಬ್ಬುಗಂಟಿಕ್ಕಿದನು. ಸೇನಾನಿ ಪ್ರಹಸ್ತನಿಗೆ ವೈರಿ ಸೈನ್ಯವನ್ನು ಎದುರಿಸಲು ಆಜ್ಞೆ ಮಾಡಿದನು. ಪೂರ್ವ ದಿಕ್ಕಿನಲ್ಲಿ ಪ್ರಹಸ್ತ, ವಜ್ರಹನು ಮತ್ತು ರಾಹುರೋಷರು; ದಕ್ಷಿಣ ದಿಕ್ಕಿನಲ್ಲಿ ಮಹಾಪಾರ್ಶ್ವ, ಮಹೋದರರು; ಪಶ್ಚಿಮ ದಿಕ್ಕಿನಲ್ಲಿ ಇಂದ್ರಜಿತು, ಶೋಣಿತಾಕ್ಷರು; ಉತ್ತರ ದಿಕ್ಕಿನಲ್ಲಿ ಅಕಂಪನ ವಜ್ರದಷ್ಟರು ಇದ್ದು ಯುದ್ಧ ಎದುರಿಸಲು ಸೂಚಿಸಿದನು. ಅಂದಿನ ಯುದ್ಧದಲ್ಲಿ ಅಂಗದನು ಮಹಾಪಾರ್ಶ್ವನನ್ನು ಎದುರಿಸಿದನು.

ಮೊದಲನೆ ದಿನದ ರಾತ್ರಿ ಯುದ್ಧದಲ್ಲಿ ಇಂದ್ರಜಿತುವಿನ ಮಾಯಾಯುದ್ಧದಲ್ಲಿ ಕಪಿಸೈನ್ಯ ಅಪಾರ ಸಂಕಟಕ್ಕೊಳಗಾಗಿ ತತ್ತರಿಸಿತು. ಅವನ ನಾಗಾಸ್ತ್ರದಿಂದ ಹೊಮ್ಮಿದ ವಿಷಬಾಣಗಳಿಂದ ರಾಮ ಲಕ್ಷ್ಮಣರೂ ಸೇರಿದಂತೆ ವಾನರರೆಲ್ಲರೂ ವಿಷಮೂರ್ಛೆಗೆ ಒಳಗಾದರು. ಆಗ ವಿಭೀಷಣನು ಪರಿಹಾರ ಒದಗಿಸಿದನು. ಅವರೆಲ್ಲರೂ ಔಷಧೀಯ ಸಂಜೀವಿನಿ ಗಾಳಿ ಬೀಸಲು ಚೇತರಿಸಿಕೊಂಡರು.

ಯುದ್ಧದ ಎರಡನೆಯ ದಿನವು ಅದ್ವಿತೀಯವೆನ್ನುವಂತೆ ಪ್ರಾರಂಭವಾಯಿತು. ಮೇಘನಾದನ ಭಯಂಕರ ವಿಷಾಸ್ತ್ರವನ್ನು ಗೆದ್ದು ಮೇಲೆದ್ದು ವಾನರರು ಸಿಂಹನಾದ ಮಾಡಿದರು. ಅದನ್ನು ಕೇಳಿ ರಾವಣನು ಆಶ್ಚರ್ಯಚಕಿತನಾದನು. ಕೋಪದಿಂದ, ತಾನು ಆಯ್ದು ನಾಯಕರಿಗೆ ಮೃತ್ಯುನೇಮ (ಗೆಲ್ಲು ಅಥವಾ ಸಾಯಿ ಎಂಬ ನಿಯಮ) ವನ್ನು ಕೊಟ್ಟು ಕದನ ಯಜ್ಞಕ್ಕೆ ಕಳುಹಿಸಿದನು.

ಅಂದಿನ ಮಧ್ಯಾಹ್ನ ರಣವಾರ್ತೆ ತಂದ ಸಾರಣನು ರಾವಣನಿಗೆ 'ಸ್ವಾಮಿಯೇ, ನಮಗೆ ಜಯವನಿತೆಯು ತೊತ್ತಾದಳು. ಪ್ರಹಸ್ತನ ಶೌರ್ಯಕ್ಕೆ ವೈರಿಸೈನ್ಯ ಹಿಂದಕ್ಕೆ ಸರಿಯಿತು. ನರಾಂತಕನನ್ನು ದ್ವಿವಿದ ಕೊಂದನು. ಕುಂಭಹನು ದ್ವಿವಿದನನ್ನು ಕೊಂದನು.

ಪ್ರಹಸ್ತನು ಮೈಂದನನ್ನೆದುರಿಸಿ ಅವರ ಸಾವಿರ ಸೈನಿಕರನ್ನು ಸಂಹರಿಸಿದನು. ಮೈಂದ ಪ್ರಹಸ್ತನ ರಥವನ್ನು ನಾಶಪಡಿಸಿದನು. ಆಗ ಪ್ರಹಸ್ತನ ಸೂಚನೆಯಂತೆ ಮಾಯಾ ಪ್ರವೀಣ ಶಾರ್ದೂಲನು ಕಪಿಸೈನ್ಯವನ್ನು ವಧಿಸಿದನು. ಕಪಿಸೈನ್ಯವು ಸೇನಾ ನಾಯಕರ ಮಾತನ್ನು ಲೆಕ್ಕಿಸದೆ ಹಿಂದಕ್ಕೆ ಓಡಿತು.' ಎಂದು ತಿಳಿಸಿದನು.

ಲಂಕೇಶ್ವರನು ಕೋಟೆಯ ಕೊತ್ತಳವನ್ನು ಏರಿ ರಣರಂಗವನ್ನು ವೀಕ್ಷಿಸುತ್ತಿದ್ದನು. ಸಂಜೆಯಾಗುತ್ತಿರಲು ಓಡೋಡಿ ಬಂದ ಚಾರನೊಬ್ಬನು ನೀಲನ ಗದಾಘಾತದಿಂದ ಪ್ರಹಸ್ತನು ಸತ್ತ ಸುದ್ದಿ ಹೇಳಿದನು. ರಾವಣನ ಮನಸ್ಸು ತತ್ತರಿಸಿತು. ಅದರಿಂದ ಚೇತರಿಸಿಕೊಳ್ಳುತ್ತಿರುವಾಗಲೇ ಇನ್ನೊಬ್ಬ ಚಾರ ಬಂದು ಕೋದಂಡಪಾಣಿ ರಾಮನ ಬಾಣಕ್ಕೆ ಲಕ್ಷ ಲಕ್ಷ ರಾಕ್ಷಸ ಸೈನ್ಯ ಹೆಣವಾಗಿ ಉರುಳಿದೆ. ಉಳಿದ ಸೈನ್ಯ ಭೀತಿಯಿಂದ ಲಂಕೆಗೆ ಹಿಂತಿರುಗುತ್ತಿದೆ ಎಂದು ತಿಳಿಸಿದನು.

ಸೂರ್ಯ ಮುಳುಗಿದ. ಕತ್ತಲಾಯಿತು. ದಶಶಿರನ ಮತಿಗೆ ಮಂಕು ಕವಿದಂತಾಯಿತು. ಅವನು,

'ಮಹಾಪಾರ್ಶ್ವನನ್ನು ಕರೆ. ಇಂದ್ರಜಿತು, ನಿಕುಂಭರನ್ನು ಕರೆ. ಕುಂಭರಿಗೆ ದುರ್ಗ ರಕ್ಷಣೆ ಮಾಡಲು ಹೇಳು. ಶ್ರೀಶಿರನನ್ನು ಹೆಬ್ಬಾಗಿಲು ರಕ್ಷಿಸಲು ಹೇಳು, ಸುಪಾರ್ಶ್ವನು ಹೊಸ ಸೈನ್ಯದೊಡನೆ ಓಡಿ ಬರುತ್ತಿರುವ ಸೈನ್ಯಕ್ಕೆ ನೆರವಾಗಲು ಹೇಳು.'

ಎಂದು ಆಜ್ಞೆ ಮಾಡಿ, ಉದ್ವಿಗ್ನನಾಗಿ ಕೊತ್ತಳದಿಂದ ಇಳಿದನು. ಆಲೋಚನೆಗೆ ಸಚಿವ ಮಂದಿರಕ್ಕೆ ನಡೆದನು. ಆ ಸಭೆಯು ಮಹಾ ಸಚಿವರುಗಳಿಂದ ಕಿಕ್ಕಿರಿದಿತ್ತು. ಅವರೆಲ್ಲರೂ ಚಿಂತೆಗೊಳಗಾಗಿದ್ದ ದಶಾನನನಿಗೆ ಒಮ್ಮತದಿಂದ ಹೀಗೆ ಹೇಳಿದರು:

'ಭಿನ್ನಮತಕ್ಕೆ ಈಗ ವೇಳೆಯಿಲ್ಲ. ಶಕ್ತಿ ಸಾಧಕ, ಅತುಲ ಪರಾಕ್ರಮಿ ಮಹಾಪಾರ್ಶ್ವ ದಳಪತಿಗೆ ಸೇನಾಪಟ್ಟವನ್ನು ಕಟ್ಟು. ಅಂದು ಸಭೆಯಲ್ಲಿ ವಿಭೀಷಣನ ಪಕ್ಷವಿಡಿದು ಹೇಳಿದುದನ್ನು ಇಂದು ನೆನೆಯಬೇಡ. ಅರ್ಹತೆಗೆ ಮನ್ನಣೆಯನ್ನು ಮಾಡದಿದ್ದರೆ ತಾನೆ ತನ್ನದನ್ನು ಕೊಂದಂತೆ. ಅದು ಹಗೆಗೆ ಉಪಕಾರವಾದಂತೆ! ಇಂದು ರಾತ್ರಿ ಪ್ರಳಯ ವೇಗದಲ್ಲಿ ನುಗ್ಗಿ ಬರುವ ಕಪಿಸೈನ್ಯವನ್ನು ತಡೆಯುವ ಬಲವಿರುವುದು ಸತ್ತ್ವ ಸಂಯಕನಾದ ಮಹಾಪಾರ್ಶ್ವನಿಗೆ, ನಿನಗೆ ಮತ್ತು ಕುಂಭಕರ್ಣನಿಗೆ ಮಾತ್ರ. ಅದು ಬೇರೆಯವರಿಂದ ಅಸಾಧ್ಯ. ಸಹೋದರನು ನಿದ್ರಾ ಸಮಾಧಿಯಲ್ಲಿದ್ದಾನೆ. ನೀನು ದೊರೆ. ಸಮರ್ಥ ಸೇವಕರು ಇರುವಾಗ ಅಂತಹ ಅರ್ಹರಿಗೆ ಆಜ್ಞೆ ಮಾಡುವುದು ರಾಜನ ಕರ್ತವ್ಯ.'

ರಾವಣನು ಸಚಿವರ ಮಾತನ್ನು ಸಮ್ಮತಿಸಿ, ಮಹಾಪಾರ್ಶ್ವನಿಗೆ ಬರಲು ಹೇಳಿ ಕಳುಹಿಸಿದನು. ಶಕ್ತಿಪೂಜೆಯಲ್ಲಿದ್ದ ಭಾಳನೇತ್ರನಿಗೆ ಸಮನಾದ ದೈತ್ಯ ಸೇನಾಪತಿಯು ಬಂದನು. ನಮಸ್ಕರಿಸಿದ ಅವನಿಗೆ ಸಮಪೀಠವನ್ನು ನೀಡಿ ಗೌರವಿಸಿದನು. ಸಚಿವರ ಇತ್ಯರ್ಥವನ್ನು ಮತ್ತು ತನ್ನ ಆಜ್ಞೆಯನ್ನು ತಿಳಿಸಿದನು. ಆಗ ಮಹಾಪಾರ್ಶ್ವನು ಗಂಭೀರವಾಗಿ ತನ್ನ ಆಂತರ್ಯವನ್ನು ಹೀಗೆ ಅರುಹಿದನು:

'ಜೀಯ, ವಿಭೀಷಣನ ಅಂದಿನ ಮಾತನ್ನು ಇಂದೂ ನೆನಪಿಗೆ ತರುತ್ತೇನೆ. ರಾಜೇಂದ್ರನೇ, ನಮ್ಮ ದೌರ್ಬಲ್ಯವಿರುವುದು ನಮ್ಮ ಸೈನ್ಯದಲ್ಲಿ ಅಲ್ಲ. ಆದರೆ, ಆ ಮಾತು ಈಗ ನನಗೆ ಅಪ್ರಸ್ತುತ ಮತ್ತು ಸ್ವಾಮಿನಿಷ್ಠೆಗೆ ತಕ್ಕುದಲ್ಲ. ನಿನ್ನ ಆಜ್ಞೆಯ ಸರ್ವಸೇನಾಧಿಪತ್ಯದ ಮಹಾಪಟ್ಟವನ್ನು ಶಿರದಲ್ಲಿ ಧರಿಸಿದ್ದೇನೆ. ನಾಳೆ ಬೆಳಗಾಗುವತನಕ ರಾಮಸಂಗ್ರಾಮಶಕ್ತಿಯನ್ನು ತಡೆಯುತ್ತೇನೆ. ಬಳಿಕ ಅಲ್ಲಿಂದ ಆಯಸ್ಸು ಇರುವವರೆಗೂ ದುಡಿಯುತ್ತೇನೆ. ನಿನ್ನ ತೇರಿನ ನೊಗಕ್ಕೆ ಹೆಗಲು ಕೊಟ್ಟು ಮಡಿಯುತ್ತೇನಲ್ಲದೆ, ಮರಳಿ ಲಂಕೆಗೆ ಪ್ರವೇಶಿಸುವುದಿಲ್ಲ. ತನ್ನ ಮಿತಿ ತಾನು ಅರಿತವನು ಎಂದಿಗೂ ದೊರೆಗೆ ಹುಸಿ ಭರವಸೆಯ ಬಲೆಯನ್ನು ಹರಡುವುದಿಲ್ಲ.'

ಅವನ ಹೃದಯದಾಳದ ನುಡಿ ಕೇಳಿ ತಿಳಿದು, ವೀರನು ವೀರನಿಗೆ ಕೊಡುವ ಕಣ್ ಮೆಚ್ಚುಗೆಯ ಕಾಣಿಕೆ ಸಲ್ಲಿಸಿ ರಾವಣನು,

'ನೀನು ಹೇಳಿದುದು ಸತ್ಯವಾದರೂ, ಸಾಧಕವರೇಣ್ಯನೇ – ನಮಗೆ ಮೋಕ್ಷಕ್ಕೆ ಯುದ್ಧವಲ್ಲದೆ ಬೇರೆ ಮಾರ್ಗವೆಲ್ಲಿದೆ ಹೇಳು? ನಡೆ, ಹೋಗು. ಈ ರಾತ್ರಿ ರಾಮಶಕ್ತಿಯ ಕಪಿಧ್ವಜಿನಿಯನ್ನು ತಡೆ. ಕೇಳು, ನಾಳೆ ಅಕಾಲದಲ್ಲಿ ಪ್ರಳಯರುದ್ರನನ್ನು ಎಬ್ಬಿಸುವಂತೆ ಕುಂಭಕರ್ಣನನ್ನು ಎಬ್ಬಿಸುತ್ತೇನೆ.' ಎಂದು ಹೇಳುತ್ತ, ಮಹಾಪಾರ್ಶ್ವನನ್ನು ರಣಯಜ್ಞದ ರುದ್ರವೇದಿಕೆಗೆ ಬೀಳ್ಕೊಟ್ಟನು. ಧಳ ಧಳ ಧಳವೆಂದು ಧರೆ ನಡುಗುವಂತೆ ಸಮರ ಭೇರಿಯ ಭೀಕರ ಶಬ್ದವು ಕಿವಿಗೆ ಅಪ್ಪಳಿಸಿತು!

* * *

ಹಗಲಿನ ಒಡೆಯ ಸೂರ್ಯನ ಸಾರಥಿಯು ಆಕಾಶಗಂಗೆಯ ಅಮೃತ ವಾಹಿನಿಯಲ್ಲಿ ತನ್ನರಥದ ಕುದುರೆಗಳನ್ನು ಮೀಯಿಸಿದನು. ಪೂರ್ವ ಪರ್ವತದ ನೆತ್ತಿಯನ್ನು ಏರಿದನು. ಆಗ ದಿವಸೇಶ್ವರನ ಕುದುರೆಯ ಕಾಲಿನ ಗೊರಸಿನ ಧೂಳಿ ಹಬ್ಬಿತೊ ಯೆನ್ನುವಂತೆ ಉಷಾಸೂರ್ಯ ಮಂಡಲವು ಕೆಂಪಾಯಿತು.

ಸರ್ವಸೇನಾಧಿಪತಿ ಮಹಾಪಾರ್ಶ್ವನು ರಾತ್ರಿಯೆಲ್ಲವೂ ವೈರಿಸೈನ್ಯವನ್ನು ರಕ್ತದಲ್ಲಿ ಮೀಯಿಸಿ ಅಸಂಖ್ಯ ಸೈನ್ಯವನ್ನು ಕೊಂದನು. ನೀಲನ ಶೌರ್ಯನ್ಯೆದಿಲೆಗೆ ರವಿಯಾದನು. ಹನುಮನ ಗರ್ವದ ಗಿರಿಗೆ ವಜ್ರಾಯುಧ ವಾದನು. ಲಕ್ಷ್ಮಣನ ವೀರತನದ ಖಡ್ಗವನ್ನು ಭಂಗ ಗೊಳಿಸಿದನು. ಅಂಗದನ ರಣಗೌರವಕ್ಕೆ ರಾಹು ಹಿಡಿಸಿದನು.ಕೊನೆಯಲ್ಲಿ ರಾಮನೇ ಹೋರಾಡಲು ಅವನಿಗೆ ಸರಿಸಮನೆನಿಸಿ ಕಾದಾಡಿ ಗಾಯಗೊಂಡು ಮೈಮರೆತನು.

ಆಗ ಅವನ ನಿಪುಣ ಸಾರಥಿಯು ಯುದ್ಧರಂಗಕ್ಕೆ ದೂರವಿದ್ದ, ಜನರಹಿತ ಕಾಡಿನ ಒಳಗಿನ ಒಂದು ಗಿರಿಯನೆತ್ತಿಗೆ ರಥವನ್ನು ಹೊಡೆದುಕೊಂಡು ಹೋದನು. ಹೊತ್ತಾರೆಯ ತಣ್ಣನೆಯಗಾಳಿ ಮೈಗೆ ಬೀಸಿತು. ಹೂಗಳು ಸೂಸಿದ ಮಧುಮಯ ಪರಿಮಳ ಪ್ರಾಣವನ್ನು ಆಘ್ರಾಣಿಸಿದನು. ಸಾರಥಿಯ ತಂಪಾದ ಸೇವೆಗೆ ಕಣ್ಣುಗಳು ತೆರೆದವು. ತಾನಿದ್ದ ಬೆಟ್ಟದ ನೆತ್ತಿಯನ್ನು ಚುಂಬಿಸುತ್ತ ಆಗತಾನೆ ಮೂಡಿ ಬಂದಿದ್ದ

ಜಗತ್‌ಚಕ್ಷು ಸೂರ್ಯನನ್ನು ನೋಡಿ ಕೈ ಮುಗಿದನು. ಸಾರಥಿಯ ಕಡೆ ನೋಡುತ್ತ ನುಡಿದನು :

'ಸಾರಥಿಯೇ , ಶುಶ್ರೂಷೆಯನ್ನು ನಿಲ್ಲಿಸು. ನನಗೆ ಸಾವಿನ ಕರೆಯ ಕೊಳಲ ಧ್ವನಿ ಕೇಳುತ್ತಿದೆ. ಮರ್ತ್ಯವನ್ನು ದಾಟಿಸುವ ಪಕ್ಷಿಗಳ ಇಂಚರವನ್ನು ಕೇಳು. ವೀರರಿಗೆ ರಣ ಭೂಮಿಯೇ ಮರಣಶಯ್ಯೆ. ನೀನೇಕೆ ನನ್ನನ್ನು ಅಲ್ಲಿಂದ ಇಲ್ಲಿಗೆ ತಂದೆ?'

ಒಡೆಯನ ಮಾತುಕೇಳಿ ತುಟಿನಡುಗಿ, ನಾಲಿಗೆ ತೊದಲಾಡಿ, ಕಣ್ಣು ಹನಿಗೂಡಿದ ಸೂತನು ಹೇಳಿದನು:

'ಸೇನಾಧಿಪತಿಯೆ , ನೀನು ಬದುಕಲು ಜಯ ನಮ್ಮದಾಗುವುದೆಂದು ದೂರಕ್ಕೆ ತಂದೆನು. ಪ್ರಾಣಭಯದಿಂದ ಬಂದಿಲ್ಲ ತಂದೆ.'

'ನನ್ನ ಬದುಕಿನಂತೆ ನಮ್ಮಗೆಲುವು!' ಎಂದು ಮುಗುಳ್ನಕ್ಕು ಹೇಳಿದ ಮಹಾಪಾರ್ಶ್ವನು ತುಸುಹೊತ್ತು ಅಂತರ್ಮುಖಿಯಾದನು. ಅನಂತರ ನಿರ್ಲಿಪ್ತ ಭಾವದಲ್ಲಿ ಮಾತು ಮುಂದುವರಿಸುತ್ತ,

'ಸಾರಥಿಯೆ, ಆ ಆಸೆಯನ್ನು ಬಿಟ್ಟು ಬಿಡು. ನನ್ನನ್ನು ಈ ರಥದಿಂದ ಹಸುರು ಹಬ್ಬಿರುವ ಪೃಥ್ವಿಯ ಮೇಲೆ ನಿಧಾನವಾಗಿ ಇಳಿಸು' ಎಂದು ಹೇಳಿದನು.

ಸೂತನು ರಥಕ್ಕೆ ಹೂಡಿದ್ದ ಮುಗಿಲು ಬಿಳಿಯ ಕುದುರೆಗಳ ಕಣ್ಣಿಯನ್ನು ಕಳಚಿದನು. ತನ್ನ ಒಡೆಯನ ಒಡಲನ್ನು– ಚಂಚಲತೆಯಿಂದ ಸ್ಥಿರತೆಗೆ ಕೊಂಡೊಯ್ಯುವಂತೆ ತೇರಿನಿಂದ ತಿರೆಗೆ ಇಳಿಸಿದನು. ತನ್ನ ಕಣ್ಣುಗಳನ್ನು ಒಡೆಯನಲ್ಲಿ ನೆಟ್ಟು ಅವನ ಅಂತಿಮ ಸಮಯದ ಸಂದೇಶವನ್ನು ಆಲಿಸಿದನು:

'ಸಾರಥಿಯೇ ಕೇಳು. ಲಂಕೇಶ್ವರನನ್ನು ಹೊರತು ಪಡಿಸಿ ಯಾರಿಗೂ ನನ್ನ ಈ ಮಾತುಗಳನ್ನು ಹೇಳಬೇಡ. ನೀನು ಇನ್ನೂ ಈ ಇಳೆಯ ವ್ಯಕ್ತಿಯಾಗಿರುವೆ. ನಾನೋ ಅರ್ಧಕ್ಕೂ ಹೆಚ್ಚಾಗಿ ಆಗಲೇ ಅಲೌಕಿಕನಾಗಿದ್ದೇನೆ. ಕಣ್ಣೀರನ್ನು ಒರೆಸಿಕೊ ನನ್ನ ಮುಖದಲ್ಲಿರುವ ಮುಗುಳ್ನಗೆಯ ಶಾಂತಿಯನ್ನು ನೋಡು, ನೀನು ಹಾಗೆಯೇ ಸಮಧಾನವನ್ನು ತಾಳು.'

ಶ್ರದ್ಧೆ ಕಣ್ತೆರೆದಂತೆ ಸಾರಥಿಗೆ ಸೇನಾಪತಿಯ ಮಾತಿನಲ್ಲಿ ಸಿದ್ಧ ಪುರುಷನ ವಾಣಿಯು ಮೈದೋರಿತು. ಆ ಶಕ್ತಿಸಾಧಕನ ನುಡಿಗೆ ಕಿವಿಗೊಟ್ಟನು.

'ಪಾಪವು ಪುಣ್ಯಮುಖಿ! ಐಹಿಕದ ವೈರಿಯು ಅಧ್ಯಾತ್ಮಿಕಕ್ಕೆ ಗೆಳೆಯನಾಗುತ್ತಾನೆ, ಗುರುವಾಗುತ್ತಾನೆ. ವಿಧಿಯ ಕಾರ್ಯ ಸಾಧನೆಗೆ ಹಲವು ಪಥಗಳು. ನನ್ನ ಇಷ್ಟದೇವತೆಯೆ ಸೀತಾ ಸ್ವರೂಪದಿಂದ ಲಂಕಾಧಿನಾಥನನ್ನು ಮೋಹಿಸಿದಳು ಎಂಬಂತೆ ತೋರುತ್ತಿದೆ. ಅಲ್ಲದಿದ್ದರೆ ನನ್ನ ಸಾಧನೆಗೆ ಇಷ್ಟು ಬೇಗ ಮರಣ ತೋರಣದ ಆಚೆ ಗೋಚರಿಸುವ ಅಮರಸಿದ್ಧಿ ಲಭಿಸುತ್ತಿತ್ತೆ?'

ಸಾರಥಿಯು ರಕ್ತಧಾರೆಯನ್ನು ಹತ್ತಿಯ ವಸ್ತ್ರದಲ್ಲಿ ಒರಸುತ್ತಿರಲು, ಹಣೆಯಲ್ಲಿ ಸೋರುತ್ತಿದ್ದ ನೆತ್ತರನ್ನು ಗಮನಿಸದೆ ಸೇನಾನಿ ಮಾತು ಮುಂದುವರಿಸಿ,

'ಈ ಮೃಣ್ಮಯ ಪೃಥ್ವಿಯು ಚಿನ್ಮಯವಾಗುತ್ತಿದೆ. ಸೂರ್ಯ ಭಗವಂತನು ಇಂದ್ರಿಯ ರೂಪದ ಮರ್ತ್ಯ ತತ್ತ್ವಗಳನ್ನು ತ್ಯಜಿಸುತ್ತ – ಆತ್ಮ ಜ್ಯೋತಿಯ ರೀತಿ ಬ್ರಹ್ಮ ವಿಜ್ಞಾನಕ್ಕೆ ಹಿಂತಿರುಗುತ್ತಿರುವನು.'

ಎಂದು ಹೇಳಿ ಸ್ವಲ್ಪ ಹೊತ್ತು ಸುಮ್ಮನಿದ್ದನು. ಬನವು ಹೊಂಬಿಸಿಲಿನಲ್ಲಿ ಸುಂದರ ವಸಂತವನ್ನು ಸಾರುತ್ತಿತ್ತು. ರಾತ್ರಿ ಕಾಳಗದಲ್ಲಿ ಸಾಹಸದಲ್ಲಿ ದಣಿದ ತೇರು ಕುದುರೆಗಳು ಹಸುರು ಗರಿಕೆ ಹುಲ್ಲನ್ನು ಸೊಂಪಾಗಿ ಮೇಯುತ್ತಿದ್ದವು. ಹೊಸ ಕಾಣ್ಕೆಯನ್ನೇನೊ ಕಂಡಂತೆ ಆ ಸೇನಾಧಿಪತಿಯು ಮತ್ತೆ ಮಾತಾಡಿದನು:

'ಸಾರಥಿಯೆ, ಇನ್ನು ಇಲ್ಲಿ ನಿಲ್ಲ ಬೇಡ. ಬೇಗ ಲಂಕೆಗೆ ಹೋಗಿ ನನ್ನ ಸಾವನ್ನು ತಿಳಿಸು. ರಥವನ್ನು ತೆಗೆದುಕೊಂಡು ಹೋಗು. ಬಿಳಿ ಬಾವುಟವನ್ನು ಹಾರಿಸು. ವೈರಿಗಳಿಂದ, ರಾಮನವರಿಂದ ನಿನಗೆ ಅಪಾಯ ಉಂಟಾಗುವುದಿಲ್ಲ. ರಾಮನನ್ನು ಕೆಣಕಿ ದಶಾನನನು ಧನ್ಯನಾದ! ಸನಿಹದಲ್ಲಿಯೆ ಅವನ ಆತ್ಮ ಉದ್ಧಾರ ವಾಗುವುದು! ತಾನು ಇದುವರೆಗೆ ಹುಡುಕಿ ಪಡೆಯದೆ ಇದ್ದ ಆದರ್ಶವನ್ನು ಆ ರಾಮನ ಅರ್ಧಾಂಗಿಯಲ್ಲಿ ಅವನು ಕಾಣುತ್ತಾನೆ . ರಾವಣನು ಮಹಾಸಾಧಕ! ಸೂತನೇ, ಮರ್ತ್ಯರಿಗೆ ಅಗೋಚರವಾದುದು ನನಗೆ ಹೃದ್ಗೋಚರವಾಗುತ್ತಿದೆ. ನೀನಿಲ್ಲಿ ನಿಲ್ಲಬೇಡ. ಇಲ್ಲಿಯ ನನ್ನ ಆತ್ಮಯಾತ್ರೆಯ ಸಮಾರಂಭದ ಸಂಭ್ರಮವನ್ನು ನರರು ನೋಡಬಾರದು.

'ಹೋಗು, ಪುರದ ಪ್ರಜೆಗಳಿಗೆ ಧೈರ್ಯವನ್ನು ಹೇಳು. ನಮ್ಮ ಸೈನ್ಯವು ಇಂದು ವಿಶ್ರಮಿಸಿಕೊಳ್ಳಲಿ. ಬೇಟೆಗಾರರಿಂದ ಕಡುಗಾಯಗೊಂಡ ಹೆಬ್ಬುಲಿ ಕಾಡಿಗೆ ನುಗ್ಗಿ, ನೆತ್ತರನ್ನು ನೆಕ್ಕಿಕೊಳ್ಳುತ್ತ ಆಯಾಸ ಕಳೆದುಕೊಳ್ಳಲು ಮಲಗುತ್ತದೆ. ಹಾಗೆ ಕಪಿಸೇನೆಯು ಕಳೆದ ರಾತ್ರಿ ನನ್ನ ಕೈಯ ಆಘಾತಕ್ಕೆ ಸಿಕ್ಕಿ ಶಿಬಿರಕ್ಕೆ ಹೋಗಿ ಮಲಗಿದೆ. ಮತ್ತೆ ವೈರಿಯು ಚೇತರಿಸಿಕೊಂಡು ಮೇಲೆ ಬೀಳುವ ಮೊದಲು – ನಮ್ಮ ಕಾಲರುದ್ರ, ಬೃಹತ್ ನಿದ್ರೆಯ ಜಗತ್‌ಭೀಕರ ಕುಂಭಕರ್ಣನು ಏಳುತ್ತಾನೆ!'

ಸಾರಥಿಗೆ ಅಲೌಕಿಕದ ಭಯ ಉಂಟಾಯಿತು. ಹೆದರಿ ಕುದುರೆಗಳು ಕೆನೆಯಲು ಗಾಳಿ ವಿಕಂಪಿಸಿತು. ತಾನು ಅದುವರೆಗೆ ಕೇಳಿದ ಯಾವ ಒಂದು ಹೋಲಿಕೆಗೂ ನಿಲುಕದ ರೀತಿಯ ನಿನಾದವೊಂದೆದ್ದು ಜಗತ್ ತ್ರಯವು ಹೆದರುವಂತೆ ಮಾಡಿತು! ಅವನು ಸೇನಾಪತಿಗೆ ಬಾಗಿ ನಮಸ್ಕರಿಸಿ ಪುರಕ್ಕೆ ಹಿಂದಿರುಗಿದನು.

* * *

ಇಡೀ ರಾತ್ರಿ ಎಡೆಬಿಡದೆ ವೈರಿಗಳ ಧಾಳಿಯಿಂದ ಲಂಕೆಯನ್ನು ರಕ್ಷಿಸಿ, ಸುಗ್ರೀವನ ಸೈನ್ಯವನ್ನು ಬತ್ತುವಂತೆ ಕುಡಿದು – ಪೂರ್ವದಲ್ಲಿ ಕೆಂಪು ಕಮಲದ ಎಸಳುಗಳ ರಕ್ತರಾಗ ರಂಜಿತ ಸೂರ್ಯನು ಕಾಣಿಸುತ್ತಿರಲು ಜಯಧ್ವನಿಗಳಿಂದ ವಿಜಯವನ್ನು ಘೋಷಿಸುತ್ತ ರಾಕ್ಷಸ ಸೇನೆಯು ಲಂಕೆಗೆ ಮರಳಿತು.

ಅವರ ವೀರಪಾನಗೋಷ್ಠಿಯಲ್ಲಿ ಆ ವಿಜಯಕ್ಕೆ ಹೃದಯ ಕಾರಣನಾದ ವೀರ

ಸೇನಾನಿ, ಪರಮ ಪ್ರಧಾನ ಕಾಣಲಿಲ್ಲ. ಆ ಕಾರಣ ಅತಿ ದುಃಖಿತನಾದ ದೈತ್ಯೇಂದ್ರನು ಕಠೋರ ಮುಖದವನಾಗಿ ಮಹಾಪಾರ್ಶ್ವನನ್ನು ಹುಡುಕಿ ತರಲು ಆಜ್ಞೆ ಮಾಡಿದನು. ಸಭೆಯನ್ನು ವಿಸರ್ಜಿಸಿದನು. ಆಳುಗಳು ಹುಡುಕಲು ಹೊರಟರು.

ಮಹಾಪಾರ್ಶ್ವನನ್ನು ಕಾಣುವುದು ಇರಲಿ, ಸಾರಥಿಯಾಗಲಿ ರಥವಾಗಲಿ ಶೋಧಕರ ದೃಷ್ಟಿಗೆ ಕಾಣಲಿಲ್ಲ. ವ್ಯರ್ಥಪ್ರಯತ್ನದಿಂದ ಖಿನ್ನರಾದ ಅವರು ಹಿಂದಿರುಗಿದರು.

ಮಹಾಪಾರ್ಶ್ವನು ವೈರಿಗಳಿಗೆ ಸೆರೆ ಹೋದನೋ, ಯುದ್ಧದಲ್ಲಿ ಮಡಿದನೋ ಅಥವಾ ವಿಭೀಷಣನಂತೆ ಮನಸ್ಸನ್ನು ಬದಲಾಯಿಸಿ ವೈರಿ ಪಕ್ಷವನ್ನು ಸೇರಿದನೋ, ನನ್ನ ರೀತಿಗೆ ಬೇಸತ್ತು ಕ್ಲೇಶಕ್ಕೆ ಒಳಗಾಗಿ ದೇಶಚ್ಯುತಿ ಹೊಂದಲು ತಾಯಿ ನೆಲವನ್ನು ತೊರೆದನೋ ಎಂದು ಸಂಶಯದ ಬೆಂಕಿಯಲ್ಲಿ ಲಂಕೇಶ್ವರನು ಬೇಯುತ್ತಿದ್ದನು. ಅಷ್ಟರಲ್ಲಿ ತನ್ನ ಸ್ವಾಮಿಯನ್ನು ಪರ್ವತದ ನೆತ್ತಿಯಲ್ಲಿ ಬಿಟ್ಟುಬಂದ ಮಹಾಪಾರ್ಶ್ವನ ಸಾರಥಿಯು ಸಕಲ ವೃತ್ತಾಂತವನ್ನು ದನುಜೇಂದ್ರನಿಗೆ ಹೇಳುತ್ತ ಅವನ ಆತ್ಮದ ಕತ್ತಲೆಗೆ ಸೂರ್ಯನಾದನು.

ಅದನ್ನು ಕೇಳಿ ರಾವಣನು ಆಶ್ಚರ್ಯಗೊಂಡನು. ಮಹಾ ಸೇನಾನಿಯನ್ನು ಕರೆತರಲು ಸಮರ್ಥರ ಸಹಾಯ ನೀಡಿ ರಥವನ್ನು ಕಳುಹಿಸಿದನು. ಸಾರಥಿಯು ಬೇಗನೆ ಹೋಗಿ ಹಿಂತಿರುಗಿ, ತಂದುದನ್ನು ಕೊಟ್ಟು ಕಂಡದ್ದನ್ನು ಹೀಗೆ ಹೇಳಿದನು:

'ಪ್ರಭುವೇ ಕೇಳು. ನಾವು ಮಹಾಸೇನಾನಿಯನ್ನು ಕಾಣಲಿಲ್ಲ. ಅಲ್ಲಿ ಕಳೆಬರಕ್ಕೆ ಬದಲು ಅಲೌಕಿಕ ಕುಸುಮ ರಾಶಿ ಇತ್ತು!'

ಭೂಮಿ ಹಡೆಯದ ಆ ಹೊಸ ಹೂಗಳನ್ನು ನೋಡಿ ದಶಾನನನು ತುಸು ಹೊತ್ತು ಧ್ಯಾನಶೀಲನಾದನು. ಅನಂತರ ಒಂದು ನಿಶ್ಚಯಕ್ಕೆ ಬಂದು – ಆ ಸುಮ ಸಮಸ್ತವನ್ನು ತಾನು ಪೂಜಿಸುವ ಶಿವಮಂದಿರಕ್ಕೆ ಮೆರವಣಿಗೆಯಲ್ಲಿ ಕಳುಹಿಸಿದನು.



7

# ಅತಿಕಾಯ

ರಾತ್ರಿಯೆಂಬ ಮುತ್ತುಗದ ಮರವು ಇದ್ದಕ್ಕಿದ್ದಂತೆ ಕಿಕ್ಕಿರಿದು ಹೂ ಬಿಟ್ಟಿತೊ ಎಂಬಂತೆ ಲಂಕಾರಾತ್ರಿಯ ಕತ್ತಲ ಹೃದಯಾಕಾರದಲ್ಲಿ ಅಗ್ನಿ ಚಿತ್ರಿತವಾಯಿತು. ವಾನರರು ರಾಕ್ಷಸದುರ್ಗಕ್ಕೆ ಪಂಜು, ಗೊಂದಿ, ಕೊಳ್ಳಿಗಳೊಂದಿಗೆ ಮುತ್ತಿ ಲಗ್ಗೆ ಹಾಕಿದರು. ಸೌಧಗಳು ಅಂಗಡಿ ಮುಂಗಟ್ಟುಗಳು ಹೊತ್ತಿ ಉರಿದವು. ಸಾಕಿದ ಬೆಕ್ಕುಗಳು ಮನೆ ಮನೆಯ ಮಾಳಿಗೆ ಹತ್ತಿ ರಕ್ಷಣೆಗಾಗಿ ಒರಲಿದವು. ಬೆಂಕಿಯು ಹೊಳೆಯಂತೆ ಉರಿ ತೆರೆಗಳ ಅಲೆದಾಟದಲ್ಲಿ ನುಗ್ಗಿ ಹರಿಯಿತು. ಬೀದಿ ಬೀದಿಗಳಲ್ಲಿ ಜನರಗೋಳಿನ ಮೊರೆಯೆಬ್ಬಿಸಿತು.

ಅಂದು ರಾತ್ರಿ ಇಂದ್ರಜಿತುವು ನಿಕುಂಭಿಲಾಯಾಗದಲ್ಲಿ ನಿರತನಾಗಿದ್ದನು. ಬೆಂಕಿಯ ಅನಾಹುತ ಸೃಷ್ಟಿಸಿ ರಾಕ್ಷಸ ಸೈನ್ಯದ ಗಮನವನ್ನು ಅತ್ತ ಹರಿಯುವಂತೆ ವಾನರರು ಸಂಚುಹೂಡಿ ಆಕ್ರಮಣ ನಡೆಸಿದ್ದರು.ರಾವಣೇಶ್ವರನು ಅವರನ್ನು ಆ ರಾತ್ರಿ ಎದುರಿಸಲು ತನಗೆ ಧಾನ್ಯಮಾಲಿನಿಯಲ್ಲಿ ಜನಿಸಿದ ತನ್ನ ಅದ್ಭುತ ಕುಮಾರ ಅತಿಕಾಯನನ್ನು ಕರೆದನು.

ಅತಿಕಾಯ ಹೆಸರಿಗೆ ತಕ್ಕಹಾಗೆ ಗಿರಿಶಿಖರದಂತೆ ವಿಶಾಲ ವಾದವನು. ಅವನು ಬ್ರಹ್ಮವರಬಲ ಸಮರಶೂರ. ರಾವಣ ಕಾರಣವಾಗಿ ರಾಜನಾಗಿದ್ದ ತನ್ನ ಪತಿಯಿಂದ ದೂರವಾದ ಪತಿವ್ರತೆ ಧ್ಯಾನ್ಯಮಾಲಿನಿಯ ಮಗನಾದ ಅವನು – ತನ್ನ ತಾಯಿಯ ಸಂಕಟ ಜೀವಕ್ಕೆ ಸಂಜೀವಿನಿಯಾಗಿದ್ದನು. ರಾಕ್ಷಸೇಂದ್ರನು ಅವನನ್ನುದ್ದೇಶಿಸಿ;

'ಮಗನೇ, ಶತ್ರುಗಳು ನಮ್ಮ ಕಷ್ಟದ ಸಮಯದ ಲಾಭ ಪಡೆಯಲು ಈ ರಾತ್ರಿಯುದ್ಧವನ್ನು ಹೂಡಿದ್ದಾರೆ. ಕುಂಭಕರ್ಣನು ಮಡಿದ. ಇಂದ್ರಜಿತು ಪ್ರತಿಜ್ಞೆ ಮಾಡಿ ನಿಕುಂಭಿಲಾ ಯಾಗ ಮಂಟಪ ಹೊಕ್ಕಿದ್ದಾನೆ. ನೀನು ವೈರಿಗಳನ್ನು ಈ ಒಂದು ರಾತ್ರಿ ಎದುರಿಸಬೇಕು. ಲಂಕೆಯನ್ನು ಬೆಂಕಿಯಿಂದ ಉಳಿಸಬೇಕು. ಈ ರಾತ್ರಿ ನಿರ್ವಿಘ್ನವಾದರೆ ಮೇಘನಾದನ ಯಾಗ ಯೋಗ ಯಶಸ್ವಿಯಾಗಿ ಬೆಳಗಾಗುವುದರೊಳಗೆ ಅದ್ಭುತ ಸಿದ್ಧಿಗಳು ಕೈ ಸೇರುವವು.'

ಎಂದು ಹೇಳಿ ಭಾವೋದ್ವೇಗಕ್ಕೆ ಒಳಗಾದನು. ಅತಿಕಾಯನ ಭುಜತಟ್ಟುತ್ತ, ಮಾತು ಮುಂದುವರಿಸಿದನು.

'ಅನಂತರ ನಿನ್ನ ಅಣ್ಣನೇನು ಮುನಿದ ಮುಕ್ಕಣ್ಣನನ್ನು ಲೆಕ್ಕಿಸುವನೆ? ಕಪಿಸೈನ್ಯ ಅಂತಿರಲಿ! ನಾಳಿನ ಮಹಾ ಉಗ್ರ ಸಂಗ್ರಾಮ ಯಜ್ಞದಲ್ಲಿ ರಾಮನನ್ನು ಹೋಮಕ್ಕೆ ಆಹುತಿ ಕೊಡುವುದು ದಿಟ! ಅಲ್ಲಿಯವರೆಗೆ ನೀನು ನಮ್ಮ ಭಾಗ್ಯಕ್ಕೆ, ದುರ್ಗಕ್ಕೆ ಮತ್ತು ಈ ದೈತ್ಯ ಸ್ವರ್ಗಕ್ಕೆ ರಕ್ಷಕನಾಗಿರಬೇಕು! ಕಂದ, ನಡೆ, ವೈರಿಯ ಮುನ್ನಡೆಯನ್ನು; ಕಣ್ಣಿಗೆ ಕಾಣುವ ಕೆಂಪಾದ ಜ್ವಾಲೆಯ ಓಟವನ್ನು ತಡೆ.'

ಮಗನು ಬಾಗಿ ತಂದೆಯ ಆಶೀರ್ವಾದ ಪಡೆದನು. ಇನ್ನೇನು ತಿರುಗಿ ಹೋಗಬೇಕು ಎನ್ನುವಾಗ ರಾವಣನು ತನ್ನ ಕಿರಿ ಹೆಂಡತಿಯ ಉಸಿರಿನ ಉಸಿರಾದ ಕುವರನನ್ನು ಮತ್ತೆ ಕರೆದನು. ಮಮತೆಯಿಂದ ಅವನ ಮುಖ ನೋಡಿದನು. ತನ್ನ ಎದೆಯೊಳಗೇನೊ ಕಳವಳ ಉಂಟಾಗಿ ಭಯ ಸಂಚಲನಕ್ಕೊಳಗಾಗಿ ಹೇಳಿದನು:

'ನೀನು ವೀರನಾಗಿರುವೆ. ನಿನಗೆ ಸಾವೆಂಬುದು ನಗೆಯ ವಿಷಯ. ಆದರೂ ನಿನಗೆ ತಿಳಿಸಲೇಬೇಕಾದ ಒಂದು ವಿಚಾರಕ್ಕೆ ನನ್ನ ಎದೆ ತವಕಿಸುತ್ತಿದೆ. ಇದು ರಾಜಾಜ್ಞೆ ಅಲ್ಲ. ಹೆತ್ತವರ ಒಂದು ಬಿನ್ನಹ. ನಿನ್ನ ತಾಯಿ ಧಾನ್ಯಮಾಲಿನಿಯ ಉಸಿರು ನಿನ್ನಿಂದ, ನಿನಗಾಗಿ ಉಳಿದಿದೆ. ಸಮರ ಸಂಭ್ರಮದಲ್ಲಿ ಅದನ್ನು ಮರೆಯಬೇಡ.'

ತಂದೆಯ ಆ ನುಡಿ ಕೇಳಿ ಅತಿಕಾಯನು ಅಂತರ್ಮುಖಿಯಾದನು. ತನ್ನ ತಾಯಿ ಧಾನ್ಯಮಾಲಿನಿ ತನಗೆ ತಾಯಿಯಾಗುವ ಮೊದಲು ಇನ್ನೊಬ್ಬನ ಅರಸಿಯಾಗಿ ಪತಿವ್ರತೆಯಾಗಿದ್ದಳು ಎಂಬುದನ್ನು ಬಾಲ್ಯದಲ್ಲಿ ತಾನು ದಾದಿಯರ ಕಣ್‌ಮಿಸುಕಿನಿಂದ ಮತ್ತು ಗುಟ್ಟಿನಂತೆ ಪಿಸುಗುಡುತ್ತಿದ್ದ ಮಾತುಗಳಿಂದ ತಿಳಿದದ್ದು ನೆನಪಾಯಿತು. ಅದು ಇಕ್ಕುಳದಂತೆ ಅವನ ಹೃದಯವನ್ನು ಹಿಡಿದು ಹಿಂಸಿಸಿತು. ಅವನ ವಿಶಾಲ ದೀರ್ಘ ಶರೀರ ಕುಗ್ಗಿತು.

ಅವನ ತಾಯಿಯು ಯಾವಾಗಲೂ ಅದ್ಯಾವುದೊ ವಿಷಾದದ ಅಂತರ್ ಜ್ವಾಲೆಯಲ್ಲಿ ಬೆಂದು ಕೃಶಳಾಗಿದ್ದಳು. ಆದರೆ ಅದು ಯಾವುದನ್ನೂ ತೋರಗೊಡದೆ ಮೇಲೆ ನಗುನಗುತ್ತಿದ್ದಳು. ಅದನ್ನು ನೋಡುತ್ತ ಬಾಲ್ಯಬಲಿಯುತ್ತಿದ್ದಂತೆ ಅವನು ಒಮ್ಮೆ ದಾದಿಯರ ಮಾತಿನ ಮರ್ಮವನ್ನು ತಿಳಿಸೆಂದು ತನ್ನ ಅವ್ವನನ್ನು ಕೇಳಿದನು. ಅವಳು ಮಗನ ಮುದ್ದಿನ ಮುಖಕ್ಕೆ ಮುಖವಿಟ್ಟು ನಿಟ್ಟುಸಿರಿಟ್ಟಳು. ತನ್ನ ಅಶ್ರು ತೀರ್ಥದಲ್ಲಿ ಅವನನ್ನು ತೋಯಿಸಿದಳು. ಹೆತ್ತವಳ ಮೂಕ ಶೋಕ ಕಿಶೋರ

ಹೃದಯಕ್ಕೆ ವಾಗ್ಮಿಯಾಗಿತ್ತು. ನೂರು ಉಪನ್ಯಾಸಗಳಿಗಿಂತಲು ಮಿಗಿಲು ಎಂಬಂತೆ ಧ್ವನಿಪೂರ್ಣವಾಗಿತ್ತು.

ವೈರಿಗಳ ಬೆಂಕಿಯ ಉರಿ ಆರಿಸಲು ಸಾಗುತ್ತಿದ್ದಂತೆ ಅವನ ಆಂತರ್ಯದ ಬೇಗುದಿ ಹೆಚ್ಚಿತು. ಅವನು ಬೆಳೆಯುತ್ತ ಬೆಳೆಯುತ್ತ ತನ್ನ ಇಮ್ಮಡಿ ಪ್ರೀತಿಯ ಅಮೃತದ ಮದ್ದಿನಿಂದ ತಾಯಿ ಧಾನ್ಯಮಾಲಿನಿಯ ಅಳಲನ್ನು ಸಂತೈಸಲು ಪ್ರಯತ್ನಿಸಿದ್ದನ್ನು ನೆನೆದನು.

ಅವನಿಗೆ ಯೌವನ ಆವರಿಸುತ್ತಿದ್ದಂತೆ ಅವ್ವನ ಭಾವಲಹರಿಯು ಹೀಗಿರಬಹುದೆ ಎಂದು ಮನದಲ್ಲಿಯೆ ಮೆಲುಕು ಹಾಕುತ್ತಿದ್ದನು:

ಅವಳು ಸುತ ಮೋಹದ ಇಂಪಿನಲ್ಲಿ ತನ್ನಾತ್ಮದುರಿಗೆ ತಂಪನ್ನೆರೆದು ಕೊಂಡಿರಬೇಕು. ತನ್ನ ಮುನ್ನಿನ ಒಲ್ಮೆಯನ್ನು ವಿಸ್ಮೃತಿಯ ಸರೋವರದಲ್ಲಿ ಮುಳುಗಿಸಲು ಪ್ರಯತ್ನಿಸಿರಬೇಕು. ಆದರೆ ಪತಿವ್ರತೆಯಾದ ಅವಳಿಗೆ, ಆ ಪ್ರಥಮ ನಿಷ್ಕಲ್ಮಶ ಪ್ರೇಮವನ್ನು; ದಶಕಂಠನ ದುರ್ಮೋಹ ವಜ್ರಾಘಾತಕ್ಕೆ ಉರುಳಿ ಹೋದ ಪವಿತ್ರಗೋಪುರವನ್ನು ಮರೆಯುವುದು ಸುಲಭವೆ? ಮನಸ್ಸು ಒಪ್ಪದಿದ್ದುದಕ್ಕೆ ತನುವೊಪ್ಪಿದವಳ ಬಾಳು ನರಕವಾಯಿತಲ್ಲ. ಮಗನಾದ ತನ್ನ ಸುಸ್ಮಿತ ಸ್ವರ್ಗದಿಂದ ಆ ನರಕ ಕೂಪವನ್ನು ಮುಚ್ಚಿ ಬದುಕುತ್ತಿರಬಹುದೆ?

* * *

ವಾನರರು ಹಚ್ಚಿದ ಅಗ್ನಿಯ ಝಳದಿಂದ ಲಂಕೆ ಕೆಂಪಾಗಿರುವಾಗ ಅತಿಕಾಯ ವೇಗವಾಗಿ ತನ್ನ ಸೇನೆಯನ್ನು ಸಜ್ಜುಗೊಳಿಸುತ್ತಿದ್ದನು. ಅದೇ ಸಮಯದಲ್ಲಿ ಅವನ ಸ್ಮೃತಿ ಪಟಲದಲ್ಲಿ ಅಸಹಾಯ ಅವ್ವನ ಎದೆಯ ಬೆಂಕಿಯ ಕೊರಡು ಹೊಗೆ ಕಾರುತ್ತಿತ್ತು.

ದಶಗ್ರೀವನು ಸೀತೆಯನ್ನು ಹೊತ್ತು ತಂದು ಅಶೋಕವನದಲ್ಲಿ ಇಟ್ಟನಂತರ ಅವಳನ್ನು ತನ್ನ ತಾಯಿ ಹೋಗಿ ನೋಡಿದಳು. ಅವನಿಜೆಯು ಸಿದ್ಧಿಪಡೆದ ಯೋಗಿಯಂತೆ ಅವಳಿಗೆ ಕಂಡಳು. ತಾನು ಯೋಗ ಭ್ರಷ್ಟಳೆಂದುಕೊಂಡು ಪೂರ್ವದ ಘಟನೆಗಳನ್ನು ನೆನೆದು ತನ್ನ ಆತ್ಮಪತನಕ್ಕೆ ನೊಂದುಕೊಂಡಳು. ತುಂಬಾ ಕೊರಗಿದಳು. ಯಾರೂ ಅರಿಯದ ರೀತಿ ತಾನು ತಪಶ್ಚರ್ಯೆಯಲ್ಲಿ ತೊಡಗಿದಳು! ಅವಳ ಮುಖದಲ್ಲಿ ಮೊದಲಿದ್ದ ಮೋದ ಕುಸಿದು ವಿಷಾದದ ಕಳೆ ಮೂಡಿತು. ದನಿ ಕುಗ್ಗಿ, ನುಡಿತಗ್ಗಿ ನೀರವತೆ ಮೃತ್ಯುವಿನ ನೆರಳಂತೆ ಅವಳನ್ನು ಸುತ್ತಿ ಸುಳಿದಾಡಿತು. ನೋಡುತ್ತಿದ್ದರೆ ರಾವಣನ ಪ್ರಣಯವಿರಲಿ, ತನ್ನ ಮಗನ ವಾತ್ಸಲ್ಯ ಮಧುವು ಆಕೆಗೆ ವಿಷದ ರೂಪವಾಗಿದ್ದಂತೆ ಕಂಡಿತು. ಓಹ್! ಆ ಅವ್ವನ ಹೃದಯ ಸಂಕಟದ ಮರ್ಮ, ಪತಿವ್ರತೆಯ ಅಂತರ್ಭಾವವನ್ನು ತಿಳಿಯಲು ಯಾರಿಗೆ ಸಾಧ್ಯ?

ಎಂದುಕೊಂಡ ವೀರ ಅತಿಕಾಯನು ಅಮ್ಮನ ಮನೋವ್ಯಥೆಯನ್ನು ನಿವಾರಿಸುವ ಉಪಾಯ ಕಾಣದೆ ಹೋದನು. ಅತ್ತಪುಲಿ ಇತ್ತ ದರಿಯ ನಡುವೆ ನಿಂತಿದ್ದ ಅವನಿಗೆ ಕಾಳಗದ ಕಣವೆ ಬಿಡುಗಡೆಯ ಬಾಗಿಲಾಗಿತ್ತು. ವೀರೋಚಿತವಾದ ರಣದ ಮರಣದ ಸುಯೋಗಕ್ಕಾಗಿ ರಥವೇರಿದನು.

ರಣರಂಗಕ್ಕೆ ಸಾಗುತ್ತಿರುವಾಗ ಮನದಲ್ಲಿ ಹೀಗೆಂದು ಕೊಂಡನು:

'ನನ್ನಿಂದ, ನನಗಾಗಿ ನನ್ನ ತಾಯಿ ಬದುಕಿ ಬೇಯುತ್ತಿರುವಳಲ್ಲವೆ? ನನ್ನ ಸಾವು ತಾಯಿಗೆ ಮತ್ತು ನನಗೆ ಶಾಂತಿಯನ್ನು ಅನುಗ್ರಹಿಸುವುದಾದರೆ, ಇಂದಿನ ಯುದ್ಧವೇ ಆ ಶಾಂತಿಯನ್ನು ತರಲಿ!'

ಬೇಸಿಗೆಯ ಹಗಲಿನಲ್ಲಿ ಕಾಡ್ಗಿಚ್ಚು ಹಬ್ಬಿ ಉರಿಯ ನಾಲಗೆಯಿಂದ ಎಲ್ಲವನ್ನು ಕಬಳಿಸುತ್ತದೆ. ಹಳ್ಳಿಗರು ಅದಕ್ಕೆ ಪ್ರತಿಯಾಗಿ ಬೆಂಕಿ ಹೊತ್ತಿಸುತ್ತಾರೆ. ಅದು ಕಾಡುಬೆಂಕಿಯನ್ನು ತಡೆಯಲಾಗುವುದಿಲ್ಲ. ಅಂತಹ ಸಮಯದಲ್ಲಿ ದೇವರ ಕೃಪೆಯಿಂದ ಭಾರಿ ಮಳೆ ಹೊಯ್ದು ಕಾಡಿನ ಬೆಂಕಿ ನಂದುತ್ತದೆ.

ರುದ್ರ ತನುವಿನ ಅತಿಕಾಯನು ಮುಂಗಾರಿನ ಮಳೆಯಂತೆ ಕುಂಭ, ಮಕರಾಕ್ಷ, ನಿಕುಂಭರೊಡಗೂಡಿ ಉರಿಯಿಡುತ್ತಿರುವ ವೈರಿದಳಕ್ಕೆ ಎದುರಾಗಿ ನಡೆದನು. ಜಲಯಂತ್ರಗಳಿಂದ ಮಳೆಸುರಿಸಿ ವೈರಿ ವಾಹಿನಿಯಿಟ್ಟಿದ್ದ ಕಿಚ್ಚನ್ನು ಆರಿಸಿದನು. ಅವರು ಕೆಚ್ಚುಗೆಟ್ಟರು.

ಮದಗಜದಂತೆ ನುಗ್ಗುತ್ತಿದ್ದ ಅತಿಕಾಯನನ್ನು ಎದುರಿಸಿ ತಡೆಯಲು ಕಂದಕ ತೋಡಲು ಅಂಗದನು ಮೈಂದ, ದ್ವಿವಿದರೊಡನೆ ಪ್ರಯತ್ನಿಸಿದನು. ಆದರೆ ಯಶಸ್ವಿಯಾಗಲಿಲ್ಲ. ರಾತ್ರಿ ಕಡೆಯ ಜಾವದ ಹೊತ್ತಿಗೆ ಕಪಿಸೇನೆಯು ಧಾನ್ಯಮಾಲಿನಿಯ ಪುತ್ರನ ಪ್ರಲಯ ಪೌರುಷಕ್ಕೆ ಹಿಂದಕ್ಕೆ ಸರಿಯಿತು. ದಶಗ್ರೀವನ ದುರ್ಗವನ್ನು ತೊರೆದು ದೂರಕ್ಕೆ ಹೋಯಿತು.

ಸೊಡರ ಕುಡಿಯನ್ನು ನಂದಿಸಲು ಪತಂಗವು ನುಗ್ಗಿ ದೀಪದ ಉರಿಯನ್ನು ಮಂಕಾಗಿಸುತ್ತ, ತಾನು ಆ ಬೆಂಕಿಗೆ ಸುಟ್ಟು ಸೀದು ಸಾಯುತ್ತದೆ. ಹಾಗೆ ವಾನರ ಅಗ್ನಿಯನ್ನು ಆರಿಸಿದ ಅತಿಕಾಯನು ತನ್ನ ಸ್ಥೂಲಕಾಯವನ್ನು ರಣರಂಗದ ಮಧ್ಯೆ ತ್ಯಜಿಸಿದನು. ತನ್ನ ಸೂಕ್ಷ್ಮ ಕಾಯದಲ್ಲಿ ಯಶೋ ಸ್ವರ್ಗದ ಕೀರ್ತಿಯ ಅಕ್ಷಯವಾದನು.



8

# ಊರ್ಮಿಳೆ

ರಾಮಚಂದ್ರನು ಶಿವಧನುಸ್ಸನ್ನು ಹೆದೆ ಏರಿಸಿ ಬಾಣ ಹೂಡಿದಾಗ ಅದು ಕಬ್ಬು ಮುರಿದಂತೆ ಮುರಿಯಿತು. ಸೀತೆಯು ರಾಮನಿಗೆ ಹಾರ ಹಾಕಿದಳು. ಜನಕ ಮಹಾರಾಜನು ರಾಮನಿಗೆ ಸೀತೆಯನ್ನು ವಿವಾಹ ಮಾಡಿಕೊಡುವ ಸಂದರ್ಭದಲ್ಲಿ ತನ್ನ ಇತರ ಪುತ್ರಿಯರಾದ ಊರ್ಮಿಳೆಯನ್ನು ಲಕ್ಷ್ಮಣನಿಗೆ, ಶ್ರುತಕೀರ್ತಿಯನ್ನು ಶತ್ರುಘ್ನನಿಗೆ, ಮಾಂಡವಿಯನ್ನು ಭರತನಿಗೆ ಧಾರೆಯೆರೆದು ಕೊಟ್ಟನು. ಶಶಿಕುಲದವರೊಂದಿಗಿನ ಬಾಂಧವ್ಯ ರವಿಕುಲದವರಿಗೆ ಹಣೆಯ ತಿಲಕದಂತೆ ಶೋಭಿಸಿತು.

ಅಯೋಧ್ಯೆಯ ಅರಮನೆಯಲ್ಲಿ ಆ ಯುವ ಪತಿ ಪತ್ನಿಯರು ಸುಖದಲ್ಲಿದ್ದರು. ಆದರೆ ಮಂಥರೆಯ ಮಮತೆಯ ಸುಳಿಗೆ ಸಿಕ್ಕಿ ದಶರಥನ ಕೌಟುಂಬಿಕ ಆನಂದ ಅಲ್ಲೋಲ ಕಲ್ಲೋಲವಾಯಿತು. ರಾಮಚಂದ್ರನು ಸೀತೆಯೊಡನೆ ಹದಿನಾಲ್ಕು ವರ್ಷ ವನವಾಸ ಹೊರಟಾಗ ಅವನೊಂದಿಗೆ ಸೀತೆ ಮತ್ತು ಸಹೋದರ ಲಕ್ಷ್ಮಣ ಹೊರಟರು.

ದುಂಬಿಯು ಸುಗ್ಗಿಯ ಮೊಗ್ಗನ್ನು ಅಪ್ಪಿಕೊಂಡಂತೆ ಇದ್ದ ಲಕ್ಷ್ಮಣನು ತಾನೊಬ್ಬನೇ ಅಣ್ಣರಾಮನ ಜೊತೆ ಹೋಗಲು ತೀರ್ಮಾನಿಸಿದನು. ಸದಾ ಮೌನದ ಮೊಗ್ಗೆಯಾಗಿರುವ ಯುವತಿ ಊರ್ಮಿಳೆಯು ಅವರು ಅರಣ್ಯವಾಸಕ್ಕೆ ಪಯಣ ಬೆಳೆಸುವ ಬೆಳಿಗ್ಗೆ ಪತಿಯ ಜೊತೆ ಅಂತಃಪುರದ ಉದ್ಯಾನದಲ್ಲಿ ಸೂರ್ಯಾಭಿಮುಖವಾಗಿ ಸಾಗುತ್ತಿದ್ದಳು. ಮುಂಜಾನೆ ಶಾಂತ

ಎಳೆಬಿಸಿಲು ಅವಳ ಮುಖಸವರಿ ಹೊಂಬಣ್ಣಕ್ಕೆ ತಿರುಗಿತ್ತು. ಅದನ್ನು ನೋಡುತ್ತ ಲಕ್ಷ್ಮಣನು ಹೇಳಿದನು:

'ರವಿಯ ಬೆಳಕಿನಲ್ಲಿ ನಿನ್ನ ಕಾಂತಿ ಮಿಂಚುತ್ತಿದೆ.'

'ಸೂರ್ಯತೇಜದ ನೀವು ದೂರ ಹೋದರೆ ನನಗೆಲ್ಲಿ ಬೆಳಕು?'

'ಮೌನದ ಆಂತರ್ಯವೇ ನಿನ್ನ ಬೆಳಕು.'

ಎಂದು ಹೇಳುತ್ತ ಅವನು ಪಶ್ಚಿಮ ದಿಕ್ಕಿನ ಕಡೆಗೆ ತಿರುಗಿದನು. ನೀಳವಾದ ಆ ಹಾದಿಯಲ್ಲಿ ಅವನ ನೆರಳು ಉದ್ದಕ್ಕೆ ಹಬ್ಬಿತ್ತು. ನಲ್ಲನ ಪಕ್ಕ ನಡೆಯುತ್ತಿದ್ದ ನಲ್ಮೆಯ ಊರ್ಮಿಳೆ ಆ ನೆರಳಲ್ಲಿ ಬಂದು ನಿಂತಳು. ಲಕ್ಷ್ಮಣ ನೋಡುತ್ತಾನೆ. ಅವನ ನೆರಳಲ್ಲಿ ಅವಳು ಒಂದಾಗಿ ಹೋಗಿದ್ದಾಳೆ. ಅವನು ನಲ್ಲೆಯನ್ನೆ ಒಲ್ಮೆಯಿಂದ ನೋಡುತ್ತಿರಲು ಅವಳು.

'ನಾನು ಹೀಗೆ ಇನ್ನು ಹದಿನಾಲ್ಕು ವರ್ಷ ನಿಮ್ಮಧ್ಯಾನದಲ್ಲಿ ಲೀನವಾಗಿರುತ್ತೇನೆ. ನನ್ನ ದೇಹ, ಪ್ರಾಣ, ಮನವು ನಿಮ್ಮ ಒಳಿತಿಗೆ ನಿಮ್ಮ ದೇಹ ತೇಜದ ನೆರಳಲ್ಲಿ ಒಂದಾಗಿರುತ್ತದೆ.'

ಎಂದು ಕಂಬನಿ ಮಿಡಿದಳು. ಸುಮಿತ್ರಾತ್ಮಜನು ಅವಳ ನೆತ್ತಿಯನ್ನು ಆಘ್ರಾಣಿಸಿ ತಬ್ಬಿಕೊಂಡು ನುಡಿದನು;

'ಮೌನ ತಪಸ್ವಿಯಾಗು.'

'ಹ್ದೂ, ನೀವು ತಪಸ್ವಿಯಂತೆ ಅಲ್ಲಿಯಿರಿ'

'ಅಪ್ಪಣೆ. ನಿನ್ನ ಕೃಪೆ.'

ಎಂದು ಹೇಳಿದ ಅವನ ಕಣ್ಣಿನ ಕಂಬನಿ ಅವಳ ಕುರುಳನ್ನು ತೊಯ್ದಿತು. ಅವಳ ಕಣ್ಣೀರು ಅವನ ಪಾದವನ್ನು ಸ್ಪರ್ಶಿಸಿತು.

ಊರ್ಮಿಳೆಯು ಸರಯೂ ನದಿ ತೀರದಲ್ಲಿ ಪರ್ಣಕುಟಿ ರಚಿಸಿದಳು. ತಪಸ್ವಿನಿಯಾಗಿ ಚಿತ್ ತಪೋಮಂಗಳದ ರಕ್ಷೆಯನ್ನು ಮೈಥಿಲಿಗೆ, ರಾಮನಿಗೆ ಮತ್ತು ಇನಿಯದೇವನಿಗೆ ಕಟ್ಟಿದಳು. ದೀರ್ಘ ಮೌನ ವ್ರತಧಾರಿಣಿಯಾದಳು.

* * *

ಗುಹನು ಗಂಗಾನದಿಯನ್ನು ದಾಟಿಸಿದ ಮೇಲೆ ಕಾಡಿನಲ್ಲಿ ರಾಮ, ಲಕ್ಷ್ಮಣ, ಸೀತೆ ಸುತ್ತಾಡಿ ಪ್ರಕೃತಿಯಾತ್ರೆಯಲ್ಲಿ ಸುಖ ಉಂಡರು. ಆ ರಾತ್ರಿ ಒಂದು ಹೆಮ್ಮರದ ಬುಡದಲ್ಲಿ ತಿರೆಯ ತಣ್ಣಗಿನ ಮಡಿಲಲ್ಲಿ ಮಲಗಿದರು. ನಡುರಾತ್ರಿಯಲ್ಲಿ ರಾಮನು ತಮ್ಮನನ್ನು ಕರೆದು ಹೇಳಿದನು:

'ತಮ್ಮಾ, ರಾತ್ರಿ ಕಳೆಯಲು ಅಯೋಧ್ಯೆಗೆ ಹಿಂತಿರುಗು. ಊರ್ಮಿಳೆ ನಿನ್ನನ್ನೇ ನೆನೆದು ಗೋಳಾಡುತ್ತಿರುವಂತೆ ನನಗೆ ಕನಸಾಯಿತು.'

'ಅಣ್ಣ, ಕಾಂತೆ ಊರ್ಮಿಳೆಯು ತಪಸ್ವಿನಿ. ನಿನ್ನೊಡನೆ ಬರುವ ಮೊದಲು

ಅವಳ ಕೃಪೆಯನ್ನು ಪಡೆದು ಬಂದಿರುವೆ. ಆ ವಿಚಾರವಾಗಿ ನೀನು ಚಿಂತಿಸಬೇಡ.' ಎಂದು ಹೇಳುತ್ತ 'ನೀನು, ಅತ್ತಿಗೆ ಇಲ್ಲದೆ ನನಗೆ ಬಾಳಿಲ್ಲ. ನೀನು ಇರದೆ ನಾನು ಸ್ವರ್ಗಕ್ಕೂ ಹೋಗುವುದಿಲ್ಲ' ಎಂದು ಅಣ್ಣನ ಪಾದಕ್ಕೆ ದಿಂಡುರುಳಿದನು.

ಚಂದ್ರಕೂಟ ಪರ್ವತದ ಎತ್ತರ ಪ್ರದೇಶದಲ್ಲಿ ಲಕ್ಷ್ಮಣನು ವಜ್ರರೋಮ ಋಷಿಯ ತಪೋಜನಗಳ ಸಹಾಯದಿಂದ ಪರ್ಣಕುಟಿಯನ್ನು ಕಟ್ಟಿದನು. ಅರಮನೆಯಲ್ಲೇನಿದೆ? ಅರಸುತನ ಎದೆಯೊಳಗಿದ್ದರೆ ಕಾಡು ಅರಮನೆಗಿಂತ ಕೀಳೆ? ರಸವಿಲ್ಲದಿಹ ಬಾಳಿಗೆ ಅರಮನೆಯೆ ಮರುಭೂಮಿ, ರಸಿಕನಿಗೆ ಅಡವಿಯು ಸಗ್ಗಕ್ಕಿಂತ ಮಿಗಿಲಾದ ಸೊಗಸಲ್ಲವೆ ಎಂಬ ತಿಳಿವಿನಲ್ಲಿದ್ದ ರಾಮನಿಗೆ ಎಲೆಮನೆಯು ಕಲೆಯ ಮನೆಯಾಯ್ತು. ವಿಪಿನಾಂಗಣವು ರಸ ಪೂರ್ಣ ತಪೋರಂಗವಾಯ್ತು. ದಿನ ಕಳೆದಂತೆ ಮೊದಲು ಪರಕೀಯವಾಗಿದ್ದ ಅಲ್ಲಿಯ ಕಲ್ಲು ಮರ, ಬಳ್ಳಿಗಳು ಬರಬರುತ್ತ ಆತ್ಮಿಯವಾದವು. ಪರ್ಣಕುಟಿಗೆ ಕಾಣುವಂತೆ ತುಸು ದೂರದಲ್ಲಿ ಒಂದು ಕಲ್ಲು ಯುಗಯುಗಗಳಿಂದ ಕಲ್ಲಾಗಿ ಬಿದ್ದಿತ್ತು. ಸೀತೆ ಮೊದಲು ಕಂಡಾಗ ಅದು ಕಲ್ಲಲ್ಲದೆ ಮತ್ತೇನೂ ಆಗಿರಲಿಲ್ಲ. ಒಂದು ದಿನ ಪರ್ಣಶಾಲೆಯ ಮುಂದೆ ಪತಿಯೊಡನೆ ಮಾತಾಡುತ್ತ ಕುಳಿತಿದ್ದಾಗ ಏನೋ ಸೋಜಿಗದಂತಾಯಿತು! ಆ ಕಲ್ಲಿಗೆ ಏನೋ ಆಕೃತಿ ಬಂದಂತೆ ತೋರಿತು. ಅದನ್ನು ಅಚ್ಚರಿಯಿಂದ ಪತಿಗೆ ತೋರಿಸಿದಳು. ಅವನೂ ಆಶ್ಚರ್ಯಗೊಂಡು ನೋಡಿದನು. ಇಬ್ಬರೂ ಸೇರಿ ಅದಕ್ಕೆ 'ಕಲ್ದವಸಿ' (ಶಿಲಾತಪಸ್ವಿ) ಎಂದು ಹೆಸರಿಟ್ಟು ಕರೆಯತೊಡಗಿದರು.

ಒಂದು ದಿನ ಬೈಗುಗಪ್ಪು ಇಳಿಯುತ್ತಿದ್ದಾಗ ಸೀತೆಯು ಆ ಕಲ್ಲಿನ ನೆತ್ತಿಯಲ್ಲಿ ಯಾರನ್ನೊ ಕಂಡಳು. ಸೊಡರ ಬೆಳಕಿನಲ್ಲಿ ಏನನ್ನೊ ಓದುತ್ತಿದ್ದ ಪತಿಯನ್ನು ಕರೆದು ಹೆದರದೆ ಅದನ್ನು ತೋರಿಸಿದಳು. ರಾಮನು ಸೋಜಿಗಗೊಂಡು ಸೂಕ್ಷ್ಮವಾಗಿ ನೋಡಿದನು. ಶೋಕ ಮುಖಭಂಗಿಯ ಅಶ್ರುಲೋಚನನಾಗಿ ನಿಟ್ಟುಸಿರುಬಿಟ್ಟನು. ಸೀತೆಗೆ ಆ ಕಲ್ಲನೆತ್ತಿಯ ಮೇಲಿರುವ ವ್ಯಕ್ತಿ ಯಾರೆಂದು ಗೊತ್ತಾಯಿತು. ಸೌದೆಯನ್ನು ಹೊತ್ತು ತಂದು ಅಲ್ಲಿ ಊರ್ಮಿಳೆಯ ವಲ್ಲಭನು ವಿಶ್ರಮಿಸಿದ್ದನು! ಅವನು ಅವಳನ್ನು ನೆನೆದು ಬೇಯುತ್ತಿರುವನೆ? ತನ್ನ ಸತಿಗಾಗಿ ದೇವರನ್ನು ಬೇಡುತ್ತಿದ್ದಾನೆಯೆ? ಎಂದು ದಂಪತಿಗಳು ಕೃತಜ್ಞತಾ ಭಾವದಿಂದ ನಿಟ್ಟುಸಿರುಬಿಟ್ಟರು. ಸೀತೆ ಮಾತನಾಡಲಾರದಾದಳು. ಭಗವನ್ ಮೌನಿಯಾದ ರಾಮನು ತಮ್ಮನನ್ನು ಮಾತನಾಡಿಸಲು ಕಲ್ದವಸಿಯ ಬಳಿಗೆ ಹೊರಟನು. ಆ ಸಂಜೆಯಿಂದ ಆ ಬಂಡೆ ಕಲ್ದವಸಿ – ಊರ್ಮಿಳೆಗೆ ಮತ್ತು ಅವಳ ಸಂಯಮಕ್ಕೆ ಪ್ರತಿಮೆಯಾಯಿತು. ಸೀತೆಗೂ ರಾಮನಿಗೂ ಅವರು ಪಾಲಿಸಬೇಕಾದ ಸಂಯಮಕ್ಕೆ ಗುರುವೂ ಎಚ್ಚರಿಕೆಯೂ ಆಯಿತು.

* * *

ಪಂಚವಟಿಯಲ್ಲಿ ಹದಿಮೂರು ವರ್ಷಗಳನ್ನು ರಸಮಯವಾಗಿ ಕಳೆದ ರಾಮಲಕ್ಷ್ಮಣ ಸೀತೆಯರು ಅಯೋಧ್ಯೆಗೆ ಹಿಂದಿರುಗಲು ನಿರ್ಧರಿಸಿದರು.

ಗೋದಾವರಿಯಲ್ಲಿ ಸ್ನಾನ ಮಾಡಿ ಸೂರ್ಯದೇವನಿಗೆ ಅರ್ಘ್ಯವನ್ನು ಎತ್ತಿದರು. ಪರಿಚಯದ ವನಸ್ಥಲಗಳನ್ನು, ಮರಳು ದಿಣ್ಣೆಗಳನ್ನು, ಜಲಸ್ಥಳಗಳನ್ನು ನೋಡಿ ಬಂದರು. ಅವರನ್ನು ನೋಡಲು ಬಂದ ಋಷಿಗಳನ್ನು, ಖಗ ಶ್ರೇಷ್ಠ ಜಟಾಯುವನ್ನು ಬೀಳ್ಕೊಂಡರು. ಆ ಮೂವರು ಕಾಡಿನಲ್ಲಿ ಸಂಗ್ರಹಿಸಿದ್ದ ಹುಲಿಯ ಹಲ್ಲು, ಹಂದಿಯ ಕೋರೆ, ಆನೆಯದಂತ, ಉಗುರು, ಚರ್ಮಗಳನ್ನು ತಮತಮಗೆ ಬೇಕಾದ್ದುವನ್ನು ಗಂಟು ಕಟ್ಟಿಕೊಂಡರು. ಸೀತೆ ಬುತ್ತಿಯನ್ನು ಕಟ್ಟಿದಳು. ಹೂಮುಡಿಯುವ ಆಸೆಯಿಂದ ಹೂ ಬಿಡಿಸಲು ಹೊರಬಂದಳು. ಬೇಲಿಯ ಮೇಲೆ ಹರಡಿದ್ದ ಒದ್ದೆ ಮಡಿಬಟ್ಟೆ ನೋಡಿ ಮೈದುನನನ್ನು ಕೇಳಿದಳು:

'ಈ ನಾರುಡೆ ಯಾರದು? ಹೋಗುವ ಹಿಗ್ಗಿನಲ್ಲಿ ಇದನ್ನು ಮರೆತಿರೇನು?'

ಪರ್ಣಕುಟಿಯಿಂದ ಹೊರಗಿಣುಕಿ ನೋಡುತ್ತ, ಊರ್ಮಿಳೇಶನು

'ಅಯ್ಯೋ ಹೇಗೆ ಮರೆಯುವೆನು? ಹರಿದಿದ್ದರೂ ಇದು ಮುನಿಕೊಟ್ಟಿದ್ದಲ್ಲವೆ? ಖರನನ್ನು ಕೊಲ್ಲುವಾಗ ಇದನ್ನೇ ಮೈಜೋಡು ಆಗಿಸಿಕೊಂಡಿದ್ದೆ. ಇದು ಶೂರ್ಪನಖಿಯಿಂದ ಪೊರೆದಿದೆ. ಇದನ್ನು ಬನದ ಬಾಳಿನ ಶುಚಿ ಕಾಣಿಕೆಯಾಗಿ ನನ್ನ ತಪಸ್ವಿನಿಗೆ ನೀಡುವೆನು ಅತ್ತಿಗೆ.'

ಎಂದು ಹೇಳುತ್ತ ತನ್ನ ಪ್ರೀತಿಯ ಪತ್ನಿಯನ್ನು ನೆನೆಸಿಕೊಂಡನು.

* * *

ಸೀತೆಯೊಡನೆ ಅಯೋಧ್ಯೆಗೆ ಹಿಂತಿರುಗಬೇಕಾಗಿದ್ದ ರಾಮ ಲಕ್ಷ್ಮಣರು ಸೀತಾಪಹರಣದಿಂದ ದುಃಖಿತರಾದರು. ಸೀತೆಯನ್ನು ಹುಡುಕುತ್ತ ಕಾಡಿನಲ್ಲಿ ಅಲೆದಾಡಿದರು. ಕಿಷ್ಕಿಂಧೆಯಲ್ಲಿ ಸುಗ್ರೀವನ ಸಖ್ಯ ದೊರೆಯಿತು. ಆಂಜನೇಯನಿಂದ ಸೀತಾನ್ವೇಷಣೆಯಾಗಿ, ಸಮುದ್ರಕ್ಕೆ ಸೇತುವೆ ಕಟ್ಟಿ ಲಂಕೆಯನ್ನು ಪ್ರವೇಶಿಸಿ, ರಾವಣನ ಸೇನೆಯೊಂದಿಗಿನ ಘೋರ ಯುದ್ಧದಲ್ಲಿ ಲಕ್ಷ್ಮಣನು ರಾಮನ ಹಿತ ಕಾಯುತ್ತಿದ್ದನು. ಆದರೆ ಅವನ ಹಿತವನ್ನು ನೆರಳಾಗಿ ತಪಸ್ವಿ ಊರ್ಮಿಳೆ ತನ್ನ ಚಿತ್ ತಪಸ್ ಶಕ್ತಿಯಿಂದ ಕಾಯುತ್ತಿದ್ದಳು.

ಕುಂಭಕರ್ಣನು ಹತನಾದ ನಂತರ ಒಂದು ಕಡೆಯಿಂದ ಅಂಗದನ ನಾಯಕತ್ವದಲ್ಲಿ ವಾನರರು ರಾತ್ರಿ ಲಂಕೆಯನ್ನು ಮುತ್ತಿ ರಾಕ್ಷಸರ ಗಮನ ಅತ್ತ ಸೆಳೆಯುವಂತೆ ಮಾಡಿದರು. ಅತಿಕಾಯ ನೊಡನೆ ಹೋರಾಡುತ್ತಿದ್ದರು. ಅದೇ ಸಮಯದಲ್ಲಿ ಲಕ್ಷ್ಮಣನು ವಿಭೀಷಣನ ಹಿತ ಮಂತ್ರಾಲೋಚನೆಯಂತೆ, ಶ್ರೀರಾಮನ ಆಜ್ಞೆಯ ಆಶೀರ್ವಾದ ರಕ್ಷಣೆಗೆ ಒಳಗಾಗಿ ಇನ್ನೊಂದು ಕಡೆ ಇಂದ್ರಜಿತುವನ್ನು ಎದುರಿಸಲು ಹೋದನು. ಅವನು ಜಾಂಬವ, ಹನುಮ, ನೀಲ, ನಳರ ಮಿತ ಪರಿವಾರದೊಡನೆ ವಿಭೀಷಣನ ಸೂಚನೆಯಂತೆ ಇಂದ್ರಜಿತು ಮೇಘನಾದನು ನಿಕುಂಭಿಲೆಯ ಯಾಗದಲ್ಲಿದ್ದ ಆಲದ ಮರದ ಗುಹೆಯ ರಹಸ್ಯವನ್ನು ಹುಡುಕುತ್ತ ಹೋದನು. ರಾತ್ರಿ ಮುಗಿಯುವುದರೊಳಗಾಗಿ ಕೂಟಯೋಧಿಯ ಯಾಗ ಸಂಕಲ್ಪವನ್ನು ಕೆಡಿಸಿ, ಪರಾಭವಗೊಳಿಸಲು ಮುನ್ನಡೆದನು.

ಆ ಕತ್ತಲೆಯ ಮರೆಯಲ್ಲಿ ತಪಸ್ವಿನಿ ಊರ್ಮಿಳೆಯ ಪತಿ ಲಕ್ಷ್ಮಣನು ಆಲದ ಮರದ ಕಂದರಕ್ಕೆ ಬಂದನು. ಮೇಘನಾದನ ಆಜ್ಞೆಯಿಂದ ಯಾಗ ರಕ್ಷಣೆಗಾಗಿ ಅಡಗಿ ನಿಂತಿದ್ದ ಕಾವಲು ಭಟರು ಮೇಲೆ ಹಾಯ್ದು ಬಂದರು. ಅವರನ್ನು ಸುಲಭವಾಗಿ ನಿಗ್ರಹಿಸಿದನು. ತಂದಿರುವ ಸೈನ್ಯವನ್ನು ನೀಲನ ನೇತೃತ್ವದಲ್ಲಿ ಕಾವಲಿರಲು ಹೇಳಿದನು. ಹನುಮ ಜಾಂಬವ ನಳ ವಿಭೀಷಣ ಸುಷೇಣರ ಕೂಡಿ ಮುಂದುವರಿದನು. ಅಲ್ಲಿ ಕೆಂಡದುರಿಯಲ್ಲದೆ ಇನ್ನೇನೂ ಕಾಣಲಿಲ್ಲ. ಅದನ್ನು ನೋಡಿ ರಾಮಾನುಜನು ರಾವಣಾನುಜನನ್ನು ಹೀಗೆ ಪ್ರಶ್ನಿಸಿದನು:

'ಅಸುರೇಂದ್ರನೇ, ನೀನು ಹೇಳಿದ ನಿಕುಂಭಿಲಾ ಯಾಗ ಶಾಲೆ ಎಲ್ಲಿದೆ? ಕಣ್ಣಿಗೆ ಬೆಂಕಿಯಲ್ಲದೆ ಇನ್ನೊಂದೇನೂ ಗೋಚರಿಸುತ್ತಿಲ್ಲ!'

ಅದಕ್ಕೆ ವಿಭೀಷಣನು ಇಂದ್ರಜಿತುವಿನ ಐಂದ್ರಜಾಲದ ತಂತ್ರ ವಿಸ್ಮಯ ವಿಧಾನವನ್ನು ಹೀಗೆ ತಿಳಿಸಿದನು:

'ದಶರಥ ಕುಮಾರನೇ ಕೇಳು, ದಶಶಿರನ ಮಗನು ಕೂಟ ವಿದ್ಯಾ ಕುಶಲ ಕಲೆಯಲ್ಲಿ ಅತಿ ಪ್ರವೀಣನು. ಅನ್ನಮಯ ತತ್ತ್ವಕ್ಕೆ ಅತೀತವಾದ ಅಮರ್ತದೀಪ್ತಿಯ ಅಂತರಿಕ್ಷ ಲೋಕದಲ್ಲಿ ನಿಕುಂಭಿಲಾ ಯಾಗವನ್ನು ರಚಿಸಿರುವನು. ಈ ಅಗ್ನಿ ಅದಕ್ಕೆ ಬಾಗಿಲು ಎಂಬುದು ದಿಟ! ಯೋಗ ನಿಪುಣನಾದ ಆಂಜನೇಯನು ಅಗ್ನಿಮುಖದಿಂದ ಇಂದ್ರಜಿತು ನಡೆಸುತ್ತಿರುವ ಯಾಗದ ಮಂತ್ರ ಮಂಟಪವನ್ನು ಪ್ರವೇಶಿಸುವುದನ್ನು ತಿಳಿದಿರುವನು. ರಾಮಾಜ್ಞೆಯನ್ನು ಶಿರದಲ್ಲಿ ಧರಿಸಿದ ಸತ್ತ್ವದ ಬಲದಿಂದ ಸೌಮಿತ್ರಿಯಾದ ನೀನು ಸಾಹಸದಿಂದ ಪ್ರಯತ್ನಿಸಿದರೆ ಯಶಸ್ವಿಯಾಗುವೆ. ಲಂಕೆಯ ಅಭ್ಯುದಯಕ್ಕೆ ಅಮಂಗಳವಾಗದಿದ್ದರೆ ಅಗ್ನಿ ಶಕ್ತಿಯನ್ನು ಆತ್ಮ ಚೈತನ್ಯದಿಂದ ಗೆಲ್ಲಲು ನನಗೆ ಅಸಾಧ್ಯವಾದುದೇನಲ್ಲ.

'ರಾವಣಿಯ ವಧೆಯು ನಿನಗೆ ಮೀಸಲಾಗಿರುವುದರಿಂದ ನೀನು ಮೊದಲು ಪ್ರವೇಶಿಸು. ಅನಂತರ ಆಂಜನೇಯ ಆಮೇಲೆ ನಮ್ಮಲ್ಲಿ ಯಾರು ಸಮರ್ಥರು ಎಂಬುದನ್ನು ನೋಡೋಣ.'

ವಿಭೀಷಣನ ಅಭಿಪ್ರಾಯದ ಪ್ರಕಾರ ನಡೆಯಲು ಲಕ್ಷ್ಮಣನ ಚಿತ್ತವು ಮನೋರಥಕ್ಕೆ ಏರಿತು. ಯಾರ ಚಿತ್ ತಪಸ್ಸಿನ ತೇಜಕ್ಕೆ ಸಮುದ್ರವು ಭಯಗೊಂಡು ಹಿಂಜರಿಯಿತೊ ಆ ರಾಮನ ಋತ ಪ್ರಭುತ್ವದ ಪಾದ ಪದ್ಮಗಳನ್ನು ಸ್ಮರಿಸಿ ನಡೆದು ಅಗ್ನಿ ಚಕ್ರಕ್ಕೆ ಕಾಲಿಟ್ಟನು. ತಕ್ಷಣ ಸಿಡಿಲಿಗೆ ಬ್ರಹ್ಮಾಂಡ ಒಡೆದು ಹೋಯಿತೊ ಎಂಬಂತೆ ಸದ್ದಾಯಿತು. ಲಕ್ಷ್ಮಣನ ಶರೀರವು ಸಿಡಿದು, ಸೀದುಹೋದ ಶವದಂತೆ ಕೆಳಗೆ ಬಿದ್ದಿತು!

ಗುರುತಿಸಲು ಅಸಾಧ್ಯವೆನುವಂತೆ ರವಿ ವಂಶಜನ ಮೈಯು ಕಾಜಾಣ ಹಕ್ಕಿಯ ಗರಿಯ ಕಾಡಿಗೆಯ ಕಪ್ಪು ಬಣ್ಣಕ್ಕೆ ತಿರುಗಿತ್ತು. ಕಣ್ಣುಗುಡ್ಡೆಗಳು ಹಿಸುಕಿದಂತೆ ಹೊರಹೊಮ್ಮಿ ಅವನ ಮುಖ ವಿಕಾರವಾಗಿತ್ತು. ಅಲ್ಲಲ್ಲಿ ಸುಲಿದ ಮೈಯಿಂದ ಬಿಳುಪಾಗಿ, ಗಾಯಗಳಿಂದ ಕೆಟ್ಟ ನೀರು ಸುರಿಯುತ್ತಿತ್ತು. ಅಲ್ಲಿದ್ದವರು ಆ ನೋಡಬಾರದ ನೋಟವನ್ನು ನೋಡಲಾರದೆ ನೋಡಿ ಹೆದರಿದರು. ಕಣ್ಮುಚ್ಚಿ ತಮ್ಮ ತಮ್ಮ ದೇವರನ್ನು ನೆನೆದು ಕಣ್ಣೀರು ಸುರಿಸಿದರು.

ವಾನರ ಮಹಾವೈದ್ಯ ಸುಶೇಷಣನು ಲಕ್ಷ್ಮಣನನ್ನು ಉಳಿಸಲು ಔಷಧಿ ಪರ್ವತದಲ್ಲಿರುವ ಸಂಜೀವನ ಲತೆಯ ಬೇರುಗಳನ್ನು ತಂದು ಅಮೃತವನ್ನು ಸುರಿಸುವವರು ಯಾರು? ಎಂದು ಪ್ರಶ್ನಿಸಿದನು. ತಕ್ಷಣ ಆಂಜನೇಯನು ತಾನು ಹೋಗಿ ತರುತ್ತೇನೆ ಎಂದು ಉತ್ತರಿಸಿದನು. ಮನೋಮಯ ಪಥದಲ್ಲಿ ಚಲಿಸಿ ಔಷಧಿ ಪರ್ವತದಲ್ಲಿ ಸಂಜೀವಿನಿ ಲತಾದೇವಿಯನ್ನು ಪ್ರಾರ್ಥಿಸಿ ಅವಳಿಂದ ಅಮೃತವನ್ನು ತನ್ನ ಬೊಗಸೆಯಲ್ಲಿ ಪಡೆದು ತಂದನು. ಲಕ್ಷ್ಮಣನಿಗೆ ನೀಡಿದನು. ಆ ಅಮೃತದಿಂದ ಮತ್ತು ಸುಷೇಣನ ಪ್ರಯೋಗದಿಂದ ಸುಮಿತ್ರಾತ್ಮಜನ ಮುಖದಲ್ಲಿ ಜೀವಕಳೆ ಅರಳಿತು. ಉಸಿರಾಡಿತು. ಶರೀರಕ್ಕೆ ಪ್ರಾಣವು ಮರಳಿತು.

ಚೇತರಿಸಿಕೊಂಡು ಪ್ರಜ್ಞೆ ಮರಳಲು ಅಪಾಯವೇನು ಆಗದವನಂತೆ ಎದ್ದು 'ಊರ್ಮಿಳಾ! ಊರ್ಮಿಳಾ!' ಎಂದು ಹೆಂಡತಿಯ ಹೆಸರನ್ನು ಕರೆದನು. ಅವಳನ್ನು ಕಾಣಲು ಆಶಿಸುವವನಂತೆ ಕಣ್ ಸುಳಿಸಿ ಸುತ್ತಲೂ ನೋಡಿದನು. ತಾನು ಕಂಡ ಒಂದು ಆಶ್ಚರ್ಯವನ್ನು ಹೀಗೆ ಹೇಳಿದನು:

'ದಿಟವಾಗಿಯೂ ನಾನು ವಲ್ಕಲಧಾರಿಯಾದ ನನ್ನ ಸತಿಯನ್ನು ನೋಡಿದೆ. ಅವಳು ತಪಶ್ಚರ್ಯೆಯಿಂದ ಪೂಜ್ಯಳಾಗಿದ್ದಳು. ಅವಳು ತನ್ನ ದಿವ್ಯಶಕ್ತಿಯಿಂದ ನನ್ನ ಹೃದಯಕ್ಕೆ ಅಮೃತವನ್ನು ಎರೆದಳು. ಮೇಘನಾದನ ಅಭಿಚಾರಿಕಾ ಯಾಗಕ್ಕೆ ನನ್ನ ಆಯಸ್ಸು ಸವೆಯದಂತೆ ತಪಸ್ಸಿನ ಕವಚವನ್ನು ತೊಡಿಸಿದಳು. ಅಂತಹ ಪೂಜ್ಯಳನ್ನು ಪ್ರಾಣವಲ್ಲಭೆಯಾಗಿ ಪಡೆದ ನಾನು ಧನ್ಯರಲ್ಲಿ ಧನ್ಯನಲ್ಲವೆ! ನಮ್ಮ ಸಂಗ್ರಾಮ ಸಿದ್ಧಿಗೆ ಇನ್ನು ಭಂಗ ಉಂಟೆ? ಈ ಅಗ್ನಿಯು ನನ್ನನ್ನು ತಡೆಯಲಾರದು.'

ಅಯೋಧ್ಯೆ ಬಿಡುವಾಗ ಊರ್ಮಿಳೆ ಹೇಳಿದಂತೆ ಅವಳು ನನ್ನ ದೇಹದ ನೆರಳೊ ಅಥವಾ ಅವಳ ತಪದ ತೇಜದಿಂದ ಉಳಿದಿರುವ ದೇಹವು ತಾನೊ ಎಂದು ಲಕ್ಷ್ಮಣ ಚಿಂತಿಸತೊಡಗಿದನು. ಅನಂತರ ಪ್ರತಿಜ್ಞಾರೂಢನಾಗಿ ಅಗ್ನಿಚಕ್ರ ಪ್ರವೇಶಿಸಿ ಇಂದ್ರಜಿತುವನ್ನು ಇಂದ್ರಾಸ್ತ್ರದಿಂದ ಸಂಹರಿಸಿದನು.

* * *

ಹದಿನಾಲ್ಕು ವರ್ಷಗಳು ಮುಗಿಯುವಷ್ಟರಲ್ಲಿ ರಾಮಚಂದ್ರನು ವನವಾಸ ಮುಗಿಸಿ, ರಾವಣನನ್ನು ಸಂಹರಿಸಿ ಸೀತೆ ಮತ್ತು ಲಕ್ಷ್ಮಣರೊಡನೆ ಅಯೋಧ್ಯೆಯನ್ನು ಪ್ರವೇಶಿಸಲು ಬರುತ್ತಿದ್ದನು. ಆ ವಾರ್ತೆ ತಿಳಿದ ಭರತನು ಅವರನ್ನು ಸಂಭ್ರಮದಿಂದ ಸ್ವಾಗತಿಸುವ ವ್ಯವಸ್ಥೆ ಮಾಡಿದನು. ಗ್ರಾಮದಿಂದ ಗ್ರಾಮಕ್ಕೆ, ನಗರದಿಂದ ನಗರಕ್ಕೆ, ಪಟ್ಟಣದಿಂದ ಪಟ್ಟಣಕ್ಕೆ, ಹಳ್ಳಿಯಿಂದ ಹಳ್ಳಿಗೆ ಕೋಸಲದ ಮೂಲೆ ಮೂಲೆಗಳಲ್ಲಿಯೂ ರಘುರಾಮನ ಆಗಮನದ ಸುದ್ದಿ ಹಬ್ಬಿತು. ಅದರ ಹಿಂದೆಯೆ ಭರತನು 'ಶ್ರೀರಾಮ ಸದ್ಧರ್ಮ ಮಂಗಳಾರ್ಥ ಚೈತ್ಯ ದೇವಾಲಯಗಳನ್ನು ಶುಚಿ ಮಾಡಿ ಸಿಂಗರಿಸಿ, ಗಾಯಕರ ಮಧುರ ಹಾಡಿನಿಂದ, ಸುಗಂಧ ಮಾಲೆಗಳಿಂದ ದಿವ್ಯ ಚೇತನಗಳನ್ನು ಪೂಜಿಸಿರಿ' ಎಂದು ಆಜ್ಞೆ ಹೊರಡಿಸಿದನು.

ಸರಯೂ ನದಿ ತೀರದ ಕುಟೀರದಲ್ಲಿದ್ದ ತಪಸ್ವಿನಿ ಊರ್ಮಿಳಾ ದೇವಿಯು – ಪೂರ್ವ ಪರಿಚಿತವಾಗಿದ್ದರೂ ಈಗ್ಗೆ ಅಪರೂಪವಾಗಿದ್ದ ಭೇರಿಯ ಸ್ವರವನ್ನು ಕೇಳಿ ರೋಮಾಂಚನಗೊಂಡಳು. ಗಿರಿವನಗಳು ತಲ್ಲಣಿಸುವಂತೆ ಧಳಂ ಧಳಂ ಧಳಂ ಎಂದು ಭೇರಿಸ್ವರ ಸಂಭ್ರಮದಿಂದ ಮೊಳಗಿತು. ಆಗ ಉಲ್ಲಾಸದಿಂದ ಭರತನ ಸತಿ ಮಾಂಡವಿ ಊರ್ಮಿಳೆಯನ್ನು ಕರೆಯಲು ಬಂದಳು. ತಪಸ್ವಿನಿ ಅಕ್ಕನನ್ನುದ್ದೇಶಿಸಿ,

'ಅಕ್ಕ ಮೌನವ್ರತ ಬಿಡು; ಮಾತಾಡು.'

ಎಂದು ಹೇಳಿದಳು. ತಂಗಿಯ ನುಡಿ ಕೇಳಿ ಊರ್ಮಿಳೆಯು ಪ್ರೀತಿಯಿಂದ ಅವಳತ್ತ ತಿರುಗಿ ನೋಡಿದಳು. ಅಕ್ಕನ ಕಣ್ಣುಗಳನ್ನು ನೋಡುತ್ತ, ಮಾಂಡವಿಯು ಏನೊ ದಿವ್ಯ ತೇಜವನ್ನು ಕಂಡಂತೆ ಅವಾಕ್ಕಾದಳು. ಮತ್ತೆ ನಿಧಾನವಾಗಿ ಒಂದೊಂದೇ ಮಾತು ಆಡಿದಳು:

'ಅಕ್ಕ ನಿನ್ನ ಕಣ್ಣುಗಳು ತಿಂಗಳ ಬೆಳಕಿನ ಚುಕ್ಕಿಗಳಂತಿವೆ.'

'ಮಾಂಡವಿ, ನಿನ್ನ ಒಲ್ಮೆಯ ಆಗಸ ನನ್ನ ಕಣ್ಣಿಗೆ ತೇಜ ತಂದಿದೆ.'

'ಇಲ್ಲ ಅಕ್ಕ. ಅದು ನಿನ್ನ ಮೌನ ತಪದ ಒಳಬೆಳಕು' ಎಂದು ಹೇಳುತ್ತ ಆನಂದಭಾಷ್ಪನೇತ್ರಳಾಗಿ ಮಾತು ಮುಂದವರಿಸಿ ನುಡಿದಳು:

'ಏಳು, ಏಳು ಅಕ್ಕ! ಕೇಳು, ವಾರ್ತೆಯನ್ನು ಭೇರಿಯು ಚೀರುತ್ತಿದೆ.'

ಸುಸ್ಥಿರ ತಪಸ್ವಿನಿ ಊರ್ಮಿಳಾ ದೇವಿಗೆ ಜೀವವು ಅಸ್ಥಿರವಾದಂತಾಯಿತು. ಗದ್ಗದಿಸಿದಳು:

'ತಂಗಿ, ದೇವರು ವನವಾಸದಿಂದ ಬಂದರೇನು?'

'ಸ್ವಾಮಿ ತಪಸ್ಸು ಮಾಡುತ್ತಿರುವ ನಂದಿಗ್ರಾಮದ ಆಶ್ರಮಕ್ಕೆ ಹೋಗಬೇಕಾಗಿದೆ. ಬೇಗ ಏಳು.'

'ತಂಗಿಯೆ, ಸ್ನಾನ ಮಾಡದೆ ಉಡದೆ, ತೊಡದೆ ಅವರೆಡೆಗೆ ಹೋಗುವುದೆ? ಅದು ಮಂಗಳಕರವಲ್ಲ!'

'ಅವರು ನಿನ್ನ ದೀರ್ಘವಾದ ಕಠಿಣ ವ್ರತವನ್ನು ನೋಡಬಾರದೆ?'

'ಚಿಃ! ಕಡಲಿನ ಎದುರು ಹನಿಗೇನು ಪ್ರದರ್ಶನ? ದೇವರ ತಪಸ್ಸಿನ ಎದುರು ನಮ್ಮದೊಂದು ತೃಣವಲ್ಲವೆ? ಸಂತೋಷ ಸಮಯದಲ್ಲಿ ನಮ್ಮ ಕಷ್ಟವನ್ನು ತೋರಿಸುವುದು ಸರಿಯಲ್ಲ! ತಂಗಿಯೆ, ಕೇಳಿಸಿಕೊ. ತನ್ನ ತಾನು ಇಲ್ಲವಾಗಿಸಿಕೊಳ್ಳುವುದೆ ಸಾಧನೆಯ ಕೊನೆಯ ಗುರಿ. ಅದೆ ತಪದ ಪರಮ ಪ್ರಯೋಜನ!'

ಎಂದು ಹೇಳಿದ ತಪಸ್ವಿನಿಯು ಅಲೆಅಲೆಯಾಗಿ ಹೊಳೆಯುವ, ಕಾಂತಿಯ ತರಂಗಗಳು ಕುಣಿಕುಣಿದು ನಲಿಯುವ, ತಿಳಿನಗೆಯ ಸರಯೂ ನದಿಯ ನೀರಿನಲ್ಲಿ ಮುಡಿ ಮುಳುಗಿಸಿ ಮಿಂದಳು. ಬಿಳಿಯ ಮಡಿಬಟ್ಟೆ ಉಟ್ಟಳು. ಪತಿ ಲಕ್ಷ್ಮಣನನ್ನು ನೆನೆಯುತ್ತ ಹಣೆ, ಕಾಲು, ಸೊಂಟಗಳಿಗೆ ಆಭರಣಗಳನ್ನು ತೊಟ್ಟಳು.

ಮುತ್ತೈದೆತನವನ್ನು ಅಲಂಕರಿಸಿಕೊಂಡಳು. ಹದಿನಾಲ್ಕು ವರ್ಷಗಳು ತನ್ನ ತಪದ ಸಫಲತೆಗೆ ತಾಳ್ಮೆ, ಧೈರ್ಯವನ್ನು ನೀಡಿದ ಪ್ರಕೃತಿಗೆ, ತೊರೆಗೆ, ಬನಕ್ಕೆ, ಪರ್ಣ ಕುಟೀರಕ್ಕೆ ಮತ್ತು ನಿತ್ಯಪರಿಚಿತ ಲತಾತನುರೂಪಿ ಚೇತನಗಳಿಗೆ ನಮಸ್ಕರಿಸಿದಳು.

ಪಕ್ಷಿಗಳಿಗೆ ಅಕ್ಕಿಯನ್ನು ಹಾಕಿದಳು. ಜಿಂಕೆಗಳಿಗೆ ಎಳೆಗರುಕೆಯನ್ನು ತಿನ್ನಿಸಿದಳು. ಸ್ಥಲದೇವತೆಯ ಚರಣಕ್ಕೆ ನಮಸ್ಕರಿಸಿ ಧೂಳನ್ನು ಶಿರದಲ್ಲಿ ಧರಿಸಿಕೊಂಡಳು. ಮಣ್ಣನ್ನು ನೆತ್ತಿಗೆ ಅಲಂಕರಿಸಿಕೊಂಡಳು. ತವರು ಮನೆಯಿಂದ ಅತ್ತೆಯ ಮನೆಗೆ ಹೋಗುವಂತೆ ಎಲೆಮನೆಯಿಂದ ಬೀಳ್ಕೊಟ್ಟಳು.

ತಂಗಿಯ ಜೊತೆಗೂಡಿ ಬಂದ ತನ್ನ ಮೌನ ತಪಸ್ವಿನಿ ಸೊಸೆ ಊರ್ಮಿಳೆಯನ್ನು ಸುಮಿತ್ರಾದೇವಿ ಬಿಗಿದಪ್ಪಿಕೊಂಡಳು! ಸಂತೋಷ ಮರಳಿ ಬಂದಂತೆ ಹೇಳಿದಳು:

'ಮಗಳೆ, ನಿನ್ನ ತಾಳಿಯ ಪುಣ್ಯದಿಂದ, ತಪದ ತೇಜದಿಂದ ಕಾಡು ಪಾಲಾಗಿದ್ದ ನಮ್ಮ ಕುಲದ ಕೀರ್ತಿಯು ಮರಳಿ ಬಂದಿದೆ! ನಮಗಾಗಿ ಹಿರಿಯರಾದ ಅತ್ತೆ ಕೌಸಲ್ಯಾದೇವಿ ಕಾಯುತ್ತಿರುವರು. ಕಿರಿ ಅತ್ತೆಯನ್ನು ಕಂಡು ಅವಳನ್ನು ತನ್ನೊಡನೆ ನಂದಿ ಗ್ರಾಮಕ್ಕೆ ಕರೆದುಕೊಂಡು ಹೋಗುವ ಕರ್ತವ್ಯದಲ್ಲಿ ಹಿರಿಯ ರಾಣಿ ನಿರತಳಾಗಿದ್ದಾಳೆ. ಊರ್ಮಿಳೆ ನಮ್ಮ ಸಂಕಟಕ್ಕೆ ಇಂದು ವಿರಾಮ ಉಂಟಾಯಿತು. ಕೈಕೆಯ ಮನೋವ್ಯಥೆ ಎಂದು ಪರಿಸಮಾಪ್ತಿಯಾಗುವುದೊ? ಬಾ, ಹೋಗಿ ಅವಳನ್ನು ತಣಿಸಿ, ಸಂತೈಸಿ ರಘುರಾಮನ ಮತ್ತು ಭರತನ ಪುಣ್ಯ ದರ್ಶನಕ್ಕೆ ಕರೆದುಕೊಂಡು ಹೋಗೋಣ!'

ಎಲ್ಲರೂ ಕೈಕೆಯ ಅರಮನೆಗೆ ನಡೆದರು. ರಾಮನ ತಾಯಿಯ ತೋಳಿನ ತೆಕ್ಕೆಯಲ್ಲಿ ಅಳುತ್ತಿದ್ದ ಕೃಶಳು, ಮಲಿನಳು, ಮೂಕಶೋಕದ ಶಿಲಾ ಪ್ರತಿಮೆಯೂ ಆದ ಕೈಕೆಯನ್ನು ಕಂಡಳು. ಅವಳು ಪೂಜಾರಹಿತ ಹಾಳು ದೇಗುಲದ ವಿಗ್ರಹದಂತೆ ದುಃಖಿತೆಯಾಗಿದ್ದಳು. ಸಂಸ್ಕಾರ ಹೀನಳಾಗಿ, ಅತಿ ದುಃಖಭಾರದಿಂದ ಕುಸಿದ ಕಡುದೀನೆ ಕೈಕೆಯು ತನಗೆ ನಮಸ್ಕರಿಸಿದ ಊರ್ಮಿಳೆಯನ್ನು ಎತ್ತಿ ಮುತ್ತಿಟ್ಟಳು. ಶಿಲಾ ಮೌನಿಯಾಗಿ ಏನೊಂದು ನುಡಿಯದೆ ಕಂಬನಿ ಕರೆದಳು! ಭರತನ ತಾಯಿಯ ಎದೆಯಲ್ಲಿ ಮಗಳಂತೆ ಮುಖವಿಟ್ಟು ಊರ್ಮಿಳೆ ಹೇಳಿದಳು:

'ಅಮ್ಮ, ನಾನು ಚಿಕ್ಕವಳು. ನಿಮ್ಮ ದುಃಖದ ಮೇರೆಯನ್ನು ನಾನು ಅಳೆಯಲಾರೆ. ನಮಗಾಗಿ, ನಿಮ್ಮ ಮಕ್ಕಳಿಗಾಗಿ ಕಾಳಕೂಟದ ವಿಷದಂತಹ ನಿಮ್ಮ ಹೃದಯ ತಾಪವನ್ನು ಹೊರಹಾಕದೆ ನೀವು ಕುಡಿಯಬೇಕಾಗಿದೆ. ತಾಯಿ, ದಶರಥನ ಪುತ್ರನ ಜೀವಿತ ಕಥೆಯ ಸಾಗರವನ್ನು ಮಥಿಸಿದಾಗ ಹೊರ ಬಂದ ಘೋರ ವಿಷವನ್ನು ಧರಿಸುವ ಶಿವನ ಶ್ರೀಕಂಠ ಶಕ್ತಿ ನಿನಗಲ್ಲದೆ ಇನ್ನಾರಿಗೆ ಇದೆ ಹೇಳು? ಸೂರ್ಯವಂಶದ ಬಾಳು ತುಂಬಿ ಗಂಗೆಯಂತೆ ಆನಂದದಿಂದ ಹರಿಯುತ್ತಿದೆ. ಬಾರಮ್ಮ, ಆಶೀರ್ವದಿಸು.'

ಸೊಸೆಯ ಮಾತನ್ನು ಕೇಳಿ ಕೈಕೆ ನಿಟ್ಟುಸಿರು ಬಿಟ್ಟಳು. ಪ್ರೀತಿಯಿಂದ ಅವಳ ಮುಖವನ್ನು ಎತ್ತಿ 'ನಿನ್ನ ಮೌನ ತಾಪಸಶಕ್ತಿ ನಮಗೆಲ್ಲ ಆದರ್ಶ.' ಎಂದು ಹೇಳುತ್ತ ಮುದ್ದಾಡಿದಳು. ಆ ಆನಂದದಲ್ಲಿ ರಾಜ ಮಂದಿರವೆಲ್ಲವೂ ಮಂಕು ಕಳೆದುಕೊಂಡು ಬೆಳ್ಳನೆ ಬೆಳಗುವಂತೆ ನಸುನಕ್ಕಳು.

9

# ಅನಲೆ

ಕನಕ ಲಂಕಾನ್ವೇಷಿಯಾದ ಇಚ್ಛಾರೂಪಿ ಆಂಜನೇಯನು ಸೌಧದಿಂದ ಸೌಧಕ್ಕೆ ಗಾಳಿಯಾಗಿ, ನೆಳಲಾಗಿ, ಕನಸಾಗಿ, ಎಳೆಯ ಬೆಳಕಿನ ಕಿರಣವಾಗಿ, ರಾತ್ರಿಯ ನಿಟ್ಟುಸಿರಾಗಿ ಇಂದ್ರಜಿತು, ಕುಂಭಕರ್ಣರ ಸೌಧಗಳನ್ನು ನೋಡಿದನು. ಅನಂತರ ವಿಭೀಷಣನ ಸೌಧದತ್ತ ನಡೆದನು.

ಆ ಶ್ರೀಮಂತ ಮಂದಿರವು ಸಾತ್ವಿಕ ಸುಗಂಧದಿಂದ ಸ್ವಾಗತ ಬಯಸಿತು. ವೀಣಾ ಮೃದುವಾಣಿಯಿಂದ ಸುಖಾಗಮನ ಗೀತೆ ಹಾಡಿತು. ಅದು ಶೋಕವನ್ನು ಮೀಟಿ ಬಾಳಿನ ಗೋಳನ್ನು ಹೇಳಿಕೊಳ್ಳುವಂತಿತ್ತು. ಅಲ್ಲಿಯ ನಾದಮಯ ಕಂಪು ಹನುಮನ ಹೃದಯ ವಜ್ರವನ್ನು ಅಲುಗಾಡಿಸಿತು. ತಂತಿಯ ಇಂಪಿಗೆ ಅಂತಃಸ್ಮೃತಿಯ ಸೊಗಸು ಕರಗಿ ಕಣ್ಣು ಹನಿಗೂಡಿತು. ಅವನು ಪಶುಪಕ್ಷಿಗಳ ಹಲವು ಅಮಂಗಳ ಆಕೃತಿಗಳನ್ನು ತಳೆದನಾದರೂ ಒಳ ಪ್ರವೇಶಿಸಲು ಸಾಧ್ಯವಾಗಲಿಲ್ಲ. ಆಗ ಇಲ್ಲಿ ದೇವಿ ಕನಕಜೆಗೆ, ದಶರಥ ಕುಮಾರನಿಗೆ, ಕಪಿಕುಲ ನರೇಂದ್ರನಿಗೆ ಮತ್ತು ಅಂಜನಾಸುತನಾದ ತನಗೆ ಸಜ್ಜನಸಂಗ ದೊರೆಯುತ್ತದೆಂದು ಹರ್ಷಗೊಂಡನು. ಓಂಕಾರದ ಶುಭರೂಪ ತಾಳಿ, ವೀಣಾನಾದದೊಂದಿಗೆ ಒಂದಾಗಿ ವಿಭೀಷಣನ ಮನೆಯನ್ನು ಹೊಕ್ಕನು.

ಚಿತ್ತವೇ ಇಂದ್ರಿಯನಾದವನಿಗೆ ಕತ್ತಲೆ ಬೆಳಕು ಒಂದೇ ಆಗಿರುತ್ತದೆ. ನೋಡಲು ಅಪೇಕ್ಷಿಸಿ ಕಣ್ಣಾಗಿ, ಕೇಳಲು ಅಪೇಕ್ಷಿಸಿ

ಕಿವಿಯಾಗಿ, ಜನಮನಸ್ಸನ್ನು ಅರಿಯಲು ಪುನಃ ಪ್ರಚೋದನೆಯಾಗಿ ಅವನು ಅಲ್ಲಿ ಸುಳಿದನು.

ಆ ಮನೆಯಲ್ಲಿಯ ಕಲೆಯ ನಯವು ಅವರ ಅಭಿರುಚಿಯ, ಸಂಯಮ ಸಾತ್ವಿಕತೆಯ ಸೊಗಸನ್ನು ಪ್ರತಿಬಿಂಬಿಸುತ್ತಿತ್ತು. ಹಾಗೆ ಸಾಗಲು ವಿಭೀಷಣನ ಮಗಳು ಅನಲೆ ರತ್ನಕಂಬಳಿಯ ಚಿತ್ರ ವೇದಿಕೆಯ ಮೇಲೆ ಕುಳಿತು ವೀಣೆಯನ್ನು ನುಡಿಸುವುದರಲ್ಲಿ ತಲ್ಲೀನಳಾಗಿದ್ದಳು. ಆ ನಾದ ಆ ಮಂದಿರದ ಮರ ಮಣ್ಣಿನ ಜಡ ಪದಾರ್ಥಗಳಲ್ಲಿ ಅನುರಣಿತವಾಗುತ್ತಿತ್ತು. ನಾದರೂಪಿ ಮರುತಾತ್ಮಜನು ಅವ್ಯಕ್ತ ಶೋಕಮಯ ಸ್ವರಸುಖವನ್ನು ಈಂಟಿ ಹರ್ಷ ಮೂರ್ಛಿತನಾದನು! ಬಳಿಯಲ್ಲಿ ತಾಯಿ ಸರಮೆ ಕುಳಿತಿದ್ದಳು. ತುಸು ದೂರದಲ್ಲಿ ಕುಳಿತಿದ್ದ ತಂದೆ ವಿಭೀಷಣನು ಕಣ್ಣುಮುಚ್ಚಿ, ಕಿವಿದೆರೆದು ಮಂಗಳ ಕಲೆಯನ್ನು ಸವಿಯುತ್ತ ಮೆಚ್ಚಿ ಆನಂದದಿಂದಿದ್ದನು.

ಮಾರುತಿಗೆ 'ಲಂಕೆಗೆ ಅತಿಥಿಗಳೇ ಇವರು' ಎಂಬ ಶಂಕೆಯುಂಟಾಗಿ ಸುತ್ತಲೂ ನೋಡುತ್ತಿದ್ದನು. ಕುವರಿ ಇದ್ದಕ್ಕಿದ್ದಂತೆ ವೀಣಾವಾದನ ನಿಲ್ಲಿಸಿದಳು. ಕಣ್ಣಿಂದ ಪ್ರಶ್ನಿಸಿದ ತಂದೆಗೆ 'ಯಾರೊ ಬಂದಂತಾಯಿತು.' ಎಂದಳು. ಆ ಮಾತನ್ನು ಸಮರ್ಥಿಸುವಂತೆ ತಾಯಿಯು 'ನಿಜ, ನನ್ನ ಶರೀರವು ಪುಳಕಿಸುತ್ತಿದೆ.' ಎಂದಳು. ಆಗ ವಿಭೀಷಣನು ಮುಗುಳುನಕ್ಕು ಹೇಳಿದನು:

'ಅಚ್ಚರಿಯೇಕೆ? ಹಗಲಿರುಳು ಸಂಚರಿಸುವ ಶಕ್ತಿಗಳು, ದೇವತಾತ್ಮಗಳು ದಿವ್ಯಕಲೆ ಇರುವಲ್ಲಿಗೆ ಬರುತ್ತವೆ. ನಮ್ಮಂತೆ ಅವರು ರಸಪ್ರಿಯರು. ನಮಗಿಂತಲೂ ಮಿಗಿಲಾದ ರಸಾಸ್ವಾದಕರು. ರಸವು ಅವರು ಉಣ್ಣುವ ಅಮೃತವಲ್ಲವೆ?'

'ಮನಸ್ಸು ಏಕೊ ಬೆಚ್ಚುತ್ತಿದೆ! ಸುಖವೊ ದುಃಖವೊ ತಿಳಿಯದೆ ಎದೆ ನಡುಗುತ್ತಿದೆ.'

ಎಂದು ನುಡಿದ ಮಗಳಿಗೆ ತಂದೆ,

'ನಿನ್ನ ಸಂಗೀತವು ಆಲಿಸುವವರ ಹೃದಯವನ್ನು ಕದಡುವ ಲೋಕ ಶೋಕ! ಮಗಳೇ, ಪ್ರಾಯದ ಮಹಿಮೆ ಅಂಥದು!'

ಸರಮಾದೇವಿಯು ಪತಿಯನ್ನು ಕುರಿತು,

'ಅಶೋಕವನದ ನಡುವೆ ರಾಮನ ತಪಸ್ವಿಯನ್ನು ಕಂಡಾಗಿನಿಂದ, ಆ ಮಹಿಮಾ ಮಹಿಳೆಯ ಅಮೃತಧಾರಾ ನುಡಿಯನ್ನು ಸವಿದಂದಿನಿಂದ, ನಮ್ಮ ಮಗಳ ರೀತಿ ಬೇರೆಯಾಗಿದೆ.'

ಅಶೋಕವನದ ಮಧ್ಯೆ ರಾಮನ ತಪಸ್ವಿನಿ ಇರುವಳೆಂಬ ನುಡಿ ಕಿವಿಗೆ ಬಿದ್ದೊಡನೆ ಆಂಜನೇಯನ ಮನಸ್ಸಿನಲ್ಲಿ ಆಸೆಯ ಬಿಸಿಲ ಬೆಳಕಾಯಿತು. ದೈತ್ಯ ಶ್ರೇಷ್ಠನಾದ ವಿಭೀಷಣನ ಮುಖದಲ್ಲಿ ದುಗುಡ ಆವರಿಸಿತು. ತಂದೆಯ ಮುಖದಲ್ಲಿ ಸಂಕಟದ ಛಾಯೆ ಕಂಡು ಅನಲಾ ಕುಮಾರಿಯು,

'ಅಪ್ಪ, ನಿಮ್ಮ ಆತ್ಮವನ್ನು ಸುಡುತ್ತಿರುವ ದುಃಖದ ಬೇಗೆಯನ್ನು ಮುಚ್ಚುವಿರ? ಸೀತೆಯ ಕಾರಣದಿಂದ ನೀವು ನನಗಿಂತ ಹೆಚ್ಚು ದುಃಖಿಗಳು. ದೊಡ್ಡಪ್ಪನಿಗಾಗಿ,

ಕುಲದೇಶದ ಕೀರ್ತಿಗಾಗಿ, ಧರ್ಮದ ಅಭ್ಯುದಯಕ್ಕಾಗಿ ಮರುಗುತ್ತಿರುವಿರಿ. ಅರಸನ ಓಲಗದಲ್ಲಿ ನಿಮ್ಮ ಮತ್ತು ನಿಮ್ಮಣ್ಣನ ಹಾಗೂ ಇತರ ಮುಖ್ಯರ ನಡುವೆ ನಡೆವ ಚರ್ಚೆಯು ನಮಗೆ ತಿಳಿಯದು ಎಂದುಕೊಂಡಿರುವಿರೆ?... ನಿನ್ನೆ ಸಂಜೆ ನಗರದ ಉತ್ತರಗಿರಿಯ ನೆತ್ತಿಯ ಮೇಲೆ ಒಂದು ಉಲ್ಕೆ ಬಿದ್ದದ್ದನ್ನು ಲಂಕೆಗೆ ಲಂಕೆಯೇ ನೋಡಿತು. ದೇವಿ, ನನ್ನ ಆ ಗುರು ದೇವಿಯನ್ನು...'

ಎಂದು ಹೇಳುತ್ತ ವೀಣೆಯನ್ನು ಕೆಳಗಿಳಿಸಿದಳು. ಗದ್ಗದಿತಳಾಗಿ, ತನ್ನನ್ನು ತಾನು ಸಾವರಿಸಿಕೊಳ್ಳುತ್ತ ಮಾತು ಮುಂದುವರಿಸಿದಳು,

'ಆ ನಿರ್ಭಾಗ್ಯೆಯನ್ನು ಮರಳಿ ಪತಿಯೆಡೆಗೆ ಕಳುಹಿಸದಿದ್ದರೆ ಲಂಕೆಗೆ ಸುಖವೆಲ್ಲಿ? ಶುಭವೆಲ್ಲಿ? ಲಂಕಿಗರಿಗೆ ನೆಮ್ಮದಿಯೆಲ್ಲಿ?... ಅಪ್ಪ, ಮಿಡಿದರೆ ಸದಾ ಮಂಗಳವನ್ನು ನುಡಿಯುವ ನನ್ನ ವೀಣೆ ಈಗ ಮಿಡಿಯಲು ಮುನಿದು ಪರಿತಪಿಸುತ್ತಿದೆ! ನೀವೀಗ ಕೇಳಿದುದು ಅದರ ಗಾನವಲ್ಲ, ರೋದನ! ಇನ್ನೂ ಆ ಓಂಕಾರದ ಆಲಾಪನೆಯ ತೀಕ್ಷ್ಣ ಸಂಕಟ ಈ ಮನೆಯಲ್ಲಿ ತುಂಬಿದಂತಿದೆ!'

ಮೂವರೂ ಆಶ್ಚರ್ಯಚಕಿತರಾಗಿ ಆಲಿಸುತ್ತಿರಲು, ಮೆಲ್ಲ ಮೆಲ್ಲನೆ ಆ ನಾದವು ದೂರದೂರಕ್ಕೆ ಸಾಗಿ ಸ್ಮೃತಿ ಮಾತ್ರವಾಯಿತು! 'ಇಂಥವರಿಂದಲೇ ಲಂಕಾ ಕನಕಲಕ್ಷ್ಮಿ ಕ್ಷೇಮದಿಂದಿರುವುದು!' ಎಂದುಕೊಂಡ ಆಂಜನೇಯನು ಅಲ್ಲಿಂದ ಮುಂದಕ್ಕೆ ನಡೆದನು.

* * *

ಲಂಕೇಶ್ವರ ರಾವಣನು ರಾಮಸೇನೆಯನ್ನು ಎದುರಿಸುವ ಬಗೆಯನ್ನು ಚರ್ಚಿಸಲು ರಾಕ್ಷಸ ಪ್ರಮುಖರ, ಸಚಿವ ಶ್ರೇಷ್ಠರ, ಸೇನಾ ಪ್ರಮುಖರ ಮತ್ತು ಸತ್ಪ್ರಜೆಗಳ ಸಭೆಯನ್ನು ಕರೆದನು. ಅದರಲ್ಲಿ ಪ್ರಥಮ ಸೇನಾನಿ ಪ್ರಹಸ್ತ, ಅಂಕಪನ, ಮೇಘನಾದರು ಯುದ್ಧವನ್ನು ಸಮರ್ಥಿಸಿದರು. ಮಹಾಪಾರ್ಶ್ವ, ಹಿರಣ್ಯಕೇಶಿ ಯುದ್ಧ ವಿರೋಧಿ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಅನಂತರ ಸಾತ್ವಿಕ, ಶಾಂತಚಿತ್ತದ, ನಿರಭಿಮಾನದ ತಪಃ ಪುರುಷ ವಿಭೀಷಣನು ಸರಳ ಶೈಲಿಯಲ್ಲಿ, ಸಭ್ಯ ಭಂಗಿಯಲ್ಲಿ ತನ್ನ ಅಭಿಪ್ರಾಯವನ್ನು ಹೀಗೆ ತಿಳಿಸಿದನು:

'...ತನ್ನ ಪತಿಯನ್ನು ನೆನೆನೆನೆದು ಕೊರಗಿ ಕರಗುವ ಸೀತೆಯ ನಿಟ್ಟುಸಿರ ತಾಪವು ವಿಧಿಯ ವಜ್ರಕ್ಕೂ ಮಿಗಿಲಾಗಿ ಕ್ರೂರವಾಗಿದೆ. ಅದು ಸೋಲಿಲ್ಲದ್ದು. ಸಹಸ್ರ ಲಂಕೇಶ್ವರರು ಮತ್ತು ಶತ ಮೇಘನಾದರ ಶಕ್ತಿ ಶೈಲಗಳು – ಸೂರ್ಯನ ಶಾಖಕ್ಕೆ ಮಂಜಿನ ರಾಶಿ ನಿಧಾನವಾಗಿ ಕರಗುವಂತೆ ಕರಗಿ ಹೋಗುವವು. ಹೆಣ್ಣಿನ ದುಃಖ ತೀವ್ರವಾಗಿ ಅರೆಯಲು ಆ ಶೈಲಗಳು ಏನಾಯಿತೆಂದು ತಿಳಿಯುವ ಮೊದಲೆ ಮಳಲರಾಸಿಗಳಾಗಿ ಹೋಗುವವು. ಕುಲಕೀರ್ತಿ ನಾಶ ಮಾಡುವ ಆ ಪಾಪವನ್ನು ಮೊದಲು ಪರಿಹರಿಸಬೇಕು. ಅನಂತರ ರಾಮಲಕ್ಷ್ಮಣರೇ ಇರಲಿ, ಕಪಿಸೈನ್ಯವೇ ಬರಲಿ ಚಿಂತೆಯಿಲ್ಲ. ಲಂಕೆ ನಮಗೆ ಸ್ವರ್ಗವಾದಂತೆ ವೈರಿಗೂ ಸ್ವರ್ಗವಾಗುತ್ತದೆ.'

ಆ ಮಾತುಗಳನ್ನು ಕೇಳಿ ಅನಿಷ್ಟದಿಂದ ಓಡಲು ಬಯಸುವವನಂತೆ ರಾವಣನು ಸಿಂಹಾಸನದಿಂದ ಎದ್ದನು. ಆಯಾಸಗೊಂಡು ವೃದ್ಧಮಂತ್ರಿ ಅವಿಂಧ್ಯನನ್ನು ಆಧರಿಸಿ ನಿಂತನು. ಅಸ್ವಸ್ಥನಾದಂತೆ ನಿಟ್ಟುಸಿರುಬಿಟ್ಟನು. ಅವನ ಮುಖದ ತೇಜಸ್ಸು ಕಳೆಗುಂದಿತು. ಪ್ರಜ್ಞೆ ಮಂಕಾಗಿ, ಕಣ್ಣಾಲಿಗಳು ತೇಲಲು ರಾಕ್ಷಸಾಧೀಶನು ಅಲ್ಲಿಂದ ಮೆಲ್ಲನೆ ಹೊರಟು ಹೋದನು. ವಿಭೀಷಣನು ಸಭೆಯನ್ನು ವಿಸರ್ಜಿಸಿದನು. ರಾಕ್ಷಸ ಕುಲಕ್ಷೇಮವನ್ನು ಚಿಂತಿಸುತ್ತ, ಕದಡಿದ ಮನಸ್ಥಿತಿಯಲ್ಲಿ ಮನೆಗೆ ನಡೆದನು.

ಅವನು ಮಗಳು ಅನಲೆಗೆ ಅಣ್ಣ ರಾವಣನ ಅಸ್ವಸ್ಥತೆಯನ್ನು ತಿಳಿಸಿದನು. ಅವಳನ್ನು ದೊಡ್ಡಪ್ಪನಿಗೆ ಶುಶ್ರೂಷೆ ಮಾಡಲು, ದೊಡ್ಡಮ್ಮನೊಂದಿಗಿರಲು ಕಳುಹಿಸಿದನು. ಮುಂದೆ ಅನುಸರಿಸಬೇಕಾದ ಮಾರ್ಗವನ್ನು ಕುರಿತು ರಾತ್ರಿಯೆಲ್ಲಾ ಆಲೋಚಿಸಿದನು.

ಹೊತ್ತಾರೆಯಾಗುವುದನ್ನು ಎದಿರು ನೋಡುತ್ತ ಪೂರ್ವಾಚಲದ ನೆತ್ತಿಯ ರೀತಿಯಲ್ಲಿ ತವಕಿಸುತ್ತಿದ್ದನು. ರಾಕ್ಷಸ ಕುಲದ ರಕ್ಷಣೆ ಮತ್ತು ಸಹೋದರನ ಹಿತಕ್ಕಾಗಿ ತಾನು ಮುಂದೆ ಹಿಡಿಯಲಿರುವ ಸನ್ಮಾರ್ಗವನ್ನು ಕುರಿತು ಮಂಥನ ನಡೆಸಿ ಒಂದು ನಿಶ್ಚಯಕ್ಕೆ ಬಂದನು.

ಬೆಳ್ಳಿ ಚುಕ್ಕೆ ಕಂಡಕೂಡಲೆ, ಮೊದಲ ಹಕ್ಕಿಯ ದನಿ ಕೇಳಿದ ತಕ್ಷಣ ತನ್ನ ಶ್ವೇತಮಂದಿರದಿಂದ ರಾಕ್ಷಸೇಂದ್ರನ ರತ್ನಸೌಧದ ಕಡೆಗೆ ನಡೆದನು. ಮಹತ್ತು ಮತ್ತು ಬೃಹತ್ತಾಗಿದ್ದು ಚಂಡಿಕಾಧ್ವಜದಿಂದ ಮೆರೆಯುತ್ತಿದ್ದ ಅರಮನೆಯನ್ನು ಪ್ರವೇಶಿಸಿದನು.

ಅನಲೆಯು ಸೇವಕರಿಂದ ತಂದೆ ಬಂದಿರುವುದನ್ನು ತಿಳಿದು ಚುರುಕಿನಿಂದ ಓಡಿ ಬಂದಳು. ಮಗಳ ಮುಖದಲ್ಲಿಯ ಉದ್ವೇಗವನ್ನು ನೋಡುತ್ತ ಸುಕ್ಕು ಮಡಿಕೆಗಳ ಉಬ್ಬಿನ ವಿಭೀಷಣನು ಅಣ್ಣನ ಕ್ಷೇಮ ಕಾತರನಾಗಿ ಪ್ರಶ್ನೆಗಳನ್ನು ಕೇಳಿದನು. ರಾಕ್ಷಸ ರಾಜನ ಅರಮನೆಯ ಶಬ್ದ ಶೂನ್ಯತೆಯ ಮೊಸಳೆನಿದ್ದೆಗೆ ಭಂಗವನ್ನು ತರಲು ಬೆದರಿದ್ದಾಳೆ ಎಂಬಂತೆ, ಏನೊಂದು ಹೇಳದೆ ಥಟ್ಟನೆ ತಂದೆಯ ಕೈಯನ್ನು ಹಿಡಿದುಕೊಂಡಳು. ಕಿವಿಗೆ ಅರ್ಥವಾಗದಂತೆ ಪಿಸುಗುಟ್ಟಿದಳು. ಶ್ರೇಷ್ಠ ವೃದ್ಧ ಅವಿಂಧ್ಯನ ಬಳಿಗೆ ಕರೆದೊಯ್ದಳು. ಅವನು ಕೈಕಸಿಯ ಮಗನನ್ನು ಮಗುವಾಗಿದ್ದಾಗಿನಿಂದ ಮುದ್ದಾಡಿದವನು. ಆ ಸಲುಗೆಯಿಂದ ದೈತ್ಯೇಂದ್ರನಿಗೆ ಇನ್ನೂ ಬೆಸೆದುಕೊಂಡಿದ್ದನು. ಮುಪ್ಪು, ಅರಿವು, ತಾಳ್ಮೆ ಮುಪ್ಪುರಿಗೊಂಡ ನೆರೆಗೂದಲಿನ ಪೂಜ್ಯನು ಅನಲೆಯ ಅಪ್ಪನನ್ನು ಕಂಡೊಡನೆ ನಿಟ್ಟುಸಿರುಬಿಟ್ಟನು. ಹಕ್ಕಿಯ ತುಪ್ಪಳದಿಂದ ಮಾಡಿದ ಪೀಠದಿಂದ ಎದ್ದು ತಬ್ಬಿಕೊಂಡನು. ಅಜ್ಜನ ಭಾವಾವೇಗಕ್ಕೆ ಸರಮಾಪತಿಯು ಬೆರಗಾಗಿ ನುಡಿದನು;

'ಅಣ್ಣ ಹೇಗಿರುವನು?'

'ನೀನು ಅವನನ್ನು ಕಾಣುವುದು ಸರಿಯಲ್ಲ.'

'ಏಕೆ?'

ಆ ಪ್ರಶ್ನೆಗೆ ಉತ್ತರ ಹೇಳಲು ಅಳುಕುತ್ತ 'ಕಳೆದ ರಾತ್ರಿ ಅವನಿಗೆ ಒಂದಿನಿತು ನಿದ್ದೆಯಿಲ್ಲ.' ಎಂದು ಹಣ್ಣು ಹಣ್ಣಾದವನು ಹೇಳಿದನು. ಎರಡು ಮೂರು ಕ್ಷಣ ಅವರು ಸುಮ್ಮನೆ ಕುಳಿತಿದ್ದರು. ಪುನಃ ಅನಲೆಯ ತಂದೆ ಅವಿಂಧ್ಯನನ್ನು ಪ್ರಶ್ನಿಸಿದನು.

'ಈಗ ಹೇಗಿರುವನು?'

'ಮಲಗಿದ್ದಾನೆ.'

'ನಿದ್ರಿಸುತ್ತಿರುವನೆ?'

'ನಿದ್ರಿಸುತ್ತಿದ್ದರೂ ಅಲ್ಲಿಯೂ ನೀರು ತುಂಬಿದ ಗುಂಡಿಯನ್ನು ಎಚ್ಚರವೆಂಬ ಆನೆಯು ಕಲಕುತ್ತಿರುತ್ತದೆ.'

'ಆ ಸ್ಥಳವನ್ನು ತೋರಿಸು.'

ಎಂದು ಹೇಳುತ್ತ ಎದ್ದ ದಶಶಿರನ ತಮ್ಮನನ್ನು ಅವಿಂಧ್ಯನು ತಡೆದನು. ಅವನನ್ನು ಲೆಕ್ಕಿಸದೆ, ತನಗೆ ಕೈಬೀಸಿ ಕರೆದ ತಂದೆಯ ಮುಖ ಮುದ್ರೆಯ ಗಾಂಭೀರ್ಯವನ್ನು ಕಂಡು ಅನಲೆಯು ಅಳುಕಿದಳು.

ಹೆಣ್ಣು ಮಕ್ಕಳಿಲ್ಲದ ದಶಗ್ರೀವನ ಎದೆಯ ಪ್ರೀತಿಯ ಅರಗಿಣಿಯ ಪ್ರಾಣವನ್ನು ಕಾಪಾಡುವ ಪಂಜರವೆನ್ನುವಂತೆ ಅನಲೆ ಚೆಲುವಿನ ಗಣಿಯಾಗಿದ್ದಳು. ಅವಳು ತಂದೆಯನ್ನು ವಿನಯ ಗೌರವಗಳಿಂದ ರಾಣಿ ಮಂಡೋದರಿಯ ಪ್ರೇಮ ಕೈಂಕರ್ಯ ಹಾಗೂ ಔಷಧಿಯಿಂದ ತುಸು ನಿದ್ದೆಗೆ ಸರಿದಿದ್ದ ಲಂಕೇಶನ ಮಂಚದ ಕಡೆಗೆ ಕರೆದೊಯ್ದಳು.

ನಮಸ್ಕರಿಸಿದ ಅತ್ತಿಗೆಗೆ ವಿಭೀಷಣನು ಪ್ರತಿ ವಂದಿಸಿದನು. ಆನೆಯ ದಂತದಿಂದ ನಿರ್ಮಿಸಲಾದ ರತ್ನರಮಣೀಯ ಭವ್ಯ ಮಂಚದಲ್ಲಿ ರಾವಣನು ಭೀಮವಿಸ್ತಾರದಿಂದ ತುಂಬಿ ಮಲಗಿದ್ದರೂ, ತನ್ನ ಲೋಕ ಆಕ್ರಮಣ ವಿಕ್ರಮವನ್ನು ಬಿಡೆನು ಎಂಬಂತೆ ಅದನ್ನು ಆಕ್ರಮಿಸಿದ್ದನು. ಮುಖ ಮುದ್ರೆಯಿಂದ ನಿದ್ರಾರುದ್ರನೆಂಬಂತೆ ಉಸಿರಾಡುತ್ತಿದ್ದ ರಾಕ್ಷಸಾಧೀಶನನ್ನು ದಿಟ್ಟಿಸಿ ನೋಡಿದನು. ಮಂಚದ ಪಕ್ಕದಲ್ಲಿ ಹೊನ್ನಿನ ಕೆತ್ತನೆಯ ಬೆತ್ತದ ಆಸನದಲ್ಲಿ ನೆಟ್ಟನೆ ಕುಳಿತುಕೊಂಡನು.

ವಿಭೀಷಣನ ಮನೋಕೇಂದ್ರದಲ್ಲಿ ರಾಜ್ಯ ಪ್ರಜೆಗಳ ಚಿಂತೆಗಳಿದ್ದರೂ, ಅವನ ದೃಷ್ಟಿಯು ದಶಗ್ರೀವನ ಮುಖದಲ್ಲಿ ನೆಟ್ಟಿತ್ತು. ಅಲ್ಲಿ ಆನಂದ ಕೆಲವೊಮ್ಮೆ ಕುಣಿದಾಡುತ್ತಿತ್ತು. ಮತ್ತೆ ಕೆಲವೊಮ್ಮೆ ಅವನ ಚಿತ್ತವು ಗುಪ್ತ ನೇಪಥ್ಯ ಪಾತಾಳಕ್ಕೆ ಸರಿದು ದುಃಸ್ವಪ್ನ ನಟನಾ ನಾಟ್ಯಗಳನ್ನು ಆಡುತ್ತಿದ್ದವು. ನೋಡುತ್ತಿದ್ದಂತೆ ಮುಖವು ಸುಕ್ಕಾಗಿ ಹುಬ್ಬು ಸೆಡೆತುಕೊಂಡಿತು. ದರ್ಪವು ಕುಗ್ಗಲು ನಿಮಿರಿದ್ದ ಮೀಸೆ ಸೋತು ಜೋಲಾಡಿತು. ಭಯಗೊಂಡಂತೆ ತುಟಿಗಳು ನಡುಗಿದವು. ರೋಮರೋಮಗಳಲ್ಲಿ ಬೆವರಾಡಿತು. ಹಿಂದೆಂದೂ ಕಾಣದ ಅಣ್ಣನ ಆ ಸ್ಥಿತಿಯನ್ನು ಕಂಡು ಅನಲೆಯ ತಂದೆಯು ಕರುಣೆಯಿಂದ ಕರಗಿ ಹೋದನು. ಕಣ್ಣಿಂದ ನೀರು ತುಳುಕಿತು.

ಸರ್ವಲೋಕ ಭಯಂಕರನಾದ ಮಹೇಂದ್ರ ವೈರಿ ದೈತ್ಯ ಚಕ್ರೇಶ್ವರನು

ನಿದ್ದೆಯಲ್ಲಿ ಮಗುವಿನಂತೆ ಅಳತೊಡಗಿದನು! ತಟ್ಟನೆ ಕಣ್ಣು ತೆರೆದನು. ಸೋದರನು ಸಮೀಪದಲ್ಲಿರುವುದನ್ನು ನೋಡಲಿಲ್ಲ. ಅನಲಾ ಕುಮಾರಿಯನ್ನು ಕಂಡನು. ಕಿರುನಗೆ ಸೂಚಿಸಿ, ನಾಚಿಕೆಯನ್ನು ದೂರ ಸರಿಸಿ, ತನ್ನ ಭಾವರಕ್ಷಣೆಗೆ ಆಶಿಸಿ ಮೃದುಸ್ವರದಿಂದ ಕರೆದನು;

'ಅನಲಾ!'

ಆ ದನಿ ಕೇಳಿ, ದೊಡ್ಡಪ್ಪನ ಮುಖದ ಕಡೆ ಬಾಗಿದಳು. ಮುಂದಕ್ಕೆ ಬಂದ ಕಾಳಸರ್ಪದಂತ ನೀಳ ಜಡೆಯನ್ನು ಹಿಂದಕ್ಕೆ ತೂಗಿದಳು. ಕೋಗಿಲೆಯಂತೆ 'ಓ' ಎಂದಳು.

'ಇಲ್ಲೇ ಇರುವೆಯಾ?'

ಅವನ ಪ್ರಶ್ನೆಯ ಭಾವವನ್ನು ಗ್ರಹಿಸಲಾರದೆ ಕೇಳಿದಳು:

'ದೊಡ್ಡಪ್ಪ?'

'ಏನಿಲ್ಲ! ನೀನು ನನ್ನನ್ನು ಅಗಲಿದ ರೀತಿ ಒಂದು ಕನಸಾಯಿತಕ್ಕ!'

ಎಂದು ನಕ್ಕಿದನಾದರೂ, ಅವನ ಕಣ್ಣುಗಳಿಂದ ದುಃಖ ಆನಂದಗಳು ಉಕ್ಕಿದಂತೆ ಅಶ್ರು ತೀರ್ಥಗಳು ಉರುಳಿದವು.

'ನಿದ್ದೆ ಮಾಡು ದೊಡ್ಡಪ್ಪ. ನಾನೆಲ್ಲಿಗೂ ಹೋಗದೆ ಇಲ್ಲಿಯೇ ಇರುತ್ತೇನೆ.'

'ನಿಜ ಹೇಳಿದೆ ಅಕ್ಕ. ಯಾರು ತೊರೆದರೂ ನೀನು ನನ್ನನ್ನು ಬಿಡುವವಳಲ್ಲ!'

ಅಸುರ ಪತಿಯು ಚಾಮರದ ಗಾಳಿಗೆ ಮತ್ತೆ ಕಣ್ಣು ಮುಚ್ಚಿದನು. ಪತ್ನಿ ಮಂಡೋದರಿಯು ಅವನ ಹೊದ್ದನ್ನು ಸರಿಪಡಿಸಿದಳು.

ಅನಲೆಯು ತನ್ನ ತಂದೆ ಕುಳಿತಕಡೆ ಸೂಕ್ಷ್ಮವಾಗಿ ಕಣ್ಣು ಹೊರಳಿಸಿದಳು. ವಿಭೀಷಣನು ನಿಟ್ಟುಸಿರು ಬಿಡುತ್ತ ತನ್ನೊಳಗೆ ತಾನು ಬೆಂದು ಹೋದನು.

ಪ್ರೀತಿಯ ಸುಳಿಗೆ ಸಿಕ್ಕ ರಾಕ್ಷಸನು ಪುನಃ ಕಣ್ಣೆವೆಗಳನ್ನು ತೆಕ್ಕನೆ ತೆರೆದು ಬಿಕ್ಕಳಿಸುತ್ತ ಹೇಳಿದನು.

'ಅಕ್ಕ ನಿನ್ನ ತಂದೆ ನಮ್ಮನ್ನು ಬಿಟ್ಟು ಹೋದನೆ?'

'ನಿನ್ನನ್ನು ಬಿಡುವನೇನು? ನನ್ನಪ್ಪ ಒಡಹುಟ್ಟಿದವನನ್ನು ಬಿಡುವನೆ?'

'ಅಕ್ಕ, ನೀನೆ ನೋಡುವೆ. ನನ್ನನ್ನು ತೊರೆದು ಹೋಗುವನು'

'ದೊಡ್ಡಪ್ಪ, ಈ ತೊದಲು ನುಡಿಗಳನ್ನು ಬಿಡು! ಬಿಟ್ಟು ಹೋಗುವನೆಂದು ಸುಮ್ಮನೆ ಏಕೆ ಸಂಶಯ ಪಡುವೆ? ನೋಡು, ಇಲ್ಲೆ ನಿನ್ನ ಬಳಿಯೆ ಹೊತ್ತಾರೆಯಿಂದ ನೆಟ್ಟಗೆ ಕುಳಿತಿದ್ದಾನೆ.'

ಎಂದು ಹೇಳಿ ಅನಲೆ ಕೈ ತೋರಿದಳು. ಸಹೋದರನ ಕಡೆಗೆ ದೃಷ್ಟಿಯನ್ನು ಹೊರಳಿಸಿದ ಅಸುರ ರಾಜನ ಮುಖಭಾವದಲ್ಲಿ ಉಂಟಾದ ಪರಿವರ್ತನೆಗಳನ್ನು ಕಂಡು ಅನಲೆ ಮತ್ತು ಮಂಡೋದರಿಯರಿಬ್ಬರೂ ಬೆಚ್ಚಿದರು. ಮರವಟ್ಟಂತೆ ನಿಂತರು.

ಮೃದು ಹೃದಯದ ಒಂದು ಗುಪ್ತ ದೌರ್ಬಲ್ಯವನ್ನು ಕದ್ದು ಅಡಗಿ ನೋಡುವವನನ್ನು ಕಂಡಾಗ ವೀರನಾದವನ ಆತ್ಮದ ಅಮೃತವು ಕಾಳಕೂಟ ವಿಷವಾಗುತ್ತದೆ. ಹಾಗೆ ಕರ್ಬುರೇಂದ್ರನ ಕೋಪ ಕರ್ಕೊಟಕ ಸರ್ಪವು ಭುಗಿಲೆದ್ದು ಕ್ರೂರವಾಯಿತು.

'ಈ ಕುಲದ್ರೋಹಿಯನ್ನು, ಶತ್ರುವಿನ ಮಿತ್ರನನ್ನು, ಗೃಹವೈರಿಯನ್ನು ನನ್ನ ಬಳಿಗೆ ಬಿಟ್ಟವರು ಯಾರು? ಹುಲ್ಲು ಮುಸುಕಿ ಮನೋಹರವಾಗಿ ಕಾಣಿಸುವ ವಂಚನೆಯ ಹಾಳಾದ ತಿಪ್ಪೆ ಗುಂಡಿಯನ್ನು ಬಿಟ್ಟವರು ಯಾರು?... ಅವಿಂಧಾರ್ಯ!'

ಎಂದು ದಶಕಂಠನೆಂಬ ಬಿರುದು ಸಾರ್ಥಕವಾಯಿತು ಎಂಬಂತೆ ಕೂಗಿದನು. ಅನಂತರ ಹೇಳಿದನು:

'ಅನಲೆ, ಅವಿಂಧ್ಯನನ್ನು ಕರೆ!'

ಅಷ್ಟರಲ್ಲಿ ಬಂದ ಅವಿಂಧ್ಯನನ್ನು ನೋಡಿ,

'ನೀವೆಲ್ಲರೂ ನನ್ನ ಕೊಲೆಯ ಸಂಚನ್ನು ರೂಪಿಸಿ, ಈ ರಾಜ ವಿದ್ರೋಹಿಯನ್ನು ರಾಜನ ಅರಮನೆಗೆ ಹೀಗೆ ಬಿಟ್ಟಿದ್ದೀರಲ್ಲವೆ?;

ಮುದಿಯನು ನೆರೆಕೂದಲು ತೆರೆತೆರೆಯಾಗಿ ನಡುಗುತ್ತಿರಲು, ಕೈ ಮುಗಿದು ಹೇಳಿದನು:

'ಮಹಾಪ್ರಭು, ಬಂದವನು ಪೌಲಸ್ತ್ಯ ವಂಶದವನು ಕೈಕಸೆಯ ಮಗ. ಕುಂಭಕರ್ಣನಿಗೆ ಮತ್ತು ದೈತ್ಯ ಚಕ್ರೇಶ್ವರನಾದ ನಿನಗೆ ತಮ್ಮ. ತಪಸ್ಸಿನಿಂದ ಸದ್ಧರ್ಮವನ್ನೆ ತನ್ನ ಬದುಕಿನ ಉಸಿರಾಗಿಸಿಕೊಂಡಿರುವ ಸತ್ತ್ವ ತೇಜಸ್ವಿ. ಬ್ರಹ್ಮವರದಿಂದ ಚಿರಂಜೀವಿಯಾದವನು.

'ದೇವಾ, ಪುಣ್ಯವೇ ಮೂರ್ತಿವೆತ್ತಂತ, ಅನಲೆಯ ತಂದೆಯಾದ ಈತನು ಅಣ್ಣನ ಕ್ಷೇಮದ ಬಗ್ಗೆ ಕಾತರನಾಗಿ ಬಂದಿರಲು ತಡೆಯುವುದು ಅಶುಭ.'

ರಾವಣನು ಆ ನುಡಿ ಕೇಳಿ, ದಿಟ್ಟಿಸಿ ನೋಡಿದನು. ನಿಟ್ಟುಸಿರುಬಿಟ್ಟನು. ಒಮ್ಮೆ ಮಂಡೋದರಿಯನ್ನು ನೋಡಿದನು. ಹತ್ತಿರ ನಿಂತು ಅಳುತ್ತಿದ್ದ ಅನಲೆಯನ್ನು ಒಮ್ಮೆ ನೋಡಿದನು. ಎದೆಯಲ್ಲಿ ಮರುಕ ಉಕ್ಕಿತು. ಬಿರುಕೊಡೆದು ಸೀಳಾಗಲಿರುವ ತನ್ನ ಆತ್ಮದ ಇಕ್ಕುಳದಲ್ಲಿ ಸಿಕ್ಕು ಲಿವಿಲಿವಿ ಒದ್ದಾಡುತ್ತಿದ್ದ ಕುದಿವೆದೆಯ ರಾವಣನು ತೆಕ್ಕನೆ ಎದ್ದನು. ಪ್ರೀತಿಯ ಪುತ್ಥಳಿಯಾದ ಅನಲೆಯನ್ನು ಹಿಡಿದು ಬರಸೆಳೆದು ಅಪ್ಪಿಕೊಂಡನು. ಸಮಾಧಾನಪಡಿಸುತ್ತ ಮುದ್ದಾಡುತ್ತ,

'ಅಳದಿರು, ಅಳದಿರು ಅಕ್ಕ! ನನಗೆ ಸಾವು ಬಂದರೂ, ನಾನು ನಿನಗೆ ನೋವಾಗುವುದನ್ನು ಮಾಡುವುದಿಲ್ಲ.'

ಎಂದು ಹೇಳಿ ಸೆಳೆದುಕೊಂಡು ತನ್ನ ಹಾಸಿಗೆಯ ಮೇಲೆ ಮೈ ತಾಗಿಸಿಕೊಂಡು ಕುಳಿತನು. ಮೌನವಾಗಿ ಎಲ್ಲವನ್ನು ನೋಡುತ್ತಿದ್ದ ತಮ್ಮನನ್ನು ಕುರಿತು ದನುಜೇಶ್ವರನು ಶಾಂತವಾಗಿ ಹೇಳಿದನು:

'ಅನಲೆ ನಿನ್ನ ಮಗಳಲ್ಲ. ನನ್ನವಳು! ಇವಳು ನನ್ನನ್ನು ಕಾಪಾಡುವ ದೇವಿ!'

ಅಣ್ಣನ ಆತ್ಮೋದ್ಧಾರ ಭಾವದೀಪ್ತ ನುಡಿ ಅರಿತು ನುಡಿದನು:

'ಆ ಪುಣ್ಯ ನನ್ನದಾಗಲಿ.'

ಅಲ್ಲಿದ್ದ ಎಲ್ಲರ ಮುಖಗಳಲ್ಲಿ ತಿಳಿನಗೆಯ ಸುಳಿ ಸುಳಿದಾಡಿತು. ಆ ನಗೆಯ ಬೆಳಕಿಗೆ ಅಲ್ಲಿ ಮೈತ್ರಿಯ ನೆರಳು ಉದ್ಭವಿಸಿತು.

'ಸೌಂದರ್ಯ ಅನಲೆಯ ಮುದ್ದು ಚೆಲುವು ಒಂದೇ ನನಗೆ ಪುಣ್ಯ ಪ್ರಚೋದಿನಿ.'

ಎಂದು ಹೇಳಿದ ದಶಗ್ರೀವನು ಚಿಂತೆಯಿಂದ ಅಂತರ್ಮುಖಿಯಾದನು. ಆಗ ಅವಿಂಧ್ಯನು,

'ತಾಯಿ ಸರಮೆ ಗಂಧರ್ವ ಕನ್ಯೆ. ತಂದೆಯು ಹಾಗೆಯೆ ಸತ್ತ್ವನಿಧಿ! ಕುವರಿ ಈ ರೀತಿ ಇರುವುದೇನು ಅಚ್ಚರಿಯೆ' ಎಂದು ಪ್ರಕಟವಾಗಿ ಹೇಳಿ, ತನ್ನೊಳಗೆ ತಾನು ಹೀಗೆಂದುಕೊಂಡನು. 'ನಿನಗೆ ಒಬ್ಬ ಮಗಳು ಹುಟ್ಟಿದ್ದರೆ ನಮಗೆ ಮತ್ತು ನಮ್ಮ ಲಂಕೆಗೆ ಈ ರೀತಿಯ ಅಮಂಗಳ ಉಂಟಾಗುತ್ತಿತ್ತೆ? ಹೆಣ್ಣು ಮಕ್ಕಳನ್ನು ಹೆತ್ತು ಪಡೆಯದ ಕಾಯಿಲೆಗೆ – ಅವರನ್ನು ಹೊತ್ತುಕೊಂಡು ಬಂದಾದರೂ ಪಡೆಯುವ ಮದ್ದು ನಿನ್ನ ರೋಗಕ್ಕೆ ಕಾರಣವಾಯಿತು. ಅದು ನಿನ್ನ ಅಪಾರ ಪೌರುಷವನ್ನು ಕಬಳಿಸುತ್ತಿದೆ!'

ಅಷ್ಟರಲ್ಲಿ ವಿಭೀಷಣನು ಕಣ್ಸನ್ನೆ ಮಾಡಲು, ಅವನು ಅಲ್ಲಿಂದ ತೆರಳಿದನು.

'ಮಹೇಂದ್ರಾರಿಯೇ, ನನ್ನನ್ನು ಕ್ಷಮಿಸು. ನಿನ್ನೆ ನಾನು ಆಡಿದ ಮಾತೇ ನಿನ್ನ ಈ ಸ್ಥಿತಿಗೆ ಕಾರಣವಾದರೆ ಅದು ಖಂಡಿತವಾಗಿಯೂ ಸರಿಯಲ್ಲ. ನಿನ್ನ ಅಭ್ಯುದಯವಲ್ಲದೆ ನನಗೆ ಮತ್ತು ನನ್ನ ನಾಲಗೆಗೆ ಬೇರೆ ಗುರಿಯಿಲ್ಲ. ಸವಿಯಾದದ್ದನ್ನು ಹೇಳದಿದ್ದ ಮಾತ್ರಕ್ಕೆ ತಿಳಿದವರು ಅಂಥವನನ್ನು ಶತ್ರು ಎನ್ನುವರೆ? ಈ ಜ್ವರ ಭ್ರಾಂತಿಯು ತೊಲಗಲು ನಾನು ಹೇಳಿದುದನ್ನು ಸಾವಧಾನವಾಗಿ ಚಿಂತಿಸು. ಮುಂದಿನ ಮಾರ್ಗವನ್ನು ಆಲೋಚಿಸಿ, ಬಾಳುವ ದಾರಿಯನ್ನು ತೀರ್ಮಾನಿಸು.'

ಎಂದು ವಿಭೀಷಣನು ಹೇಳಿದನು.

ತಮ್ಮನ ಮಗಳನ್ನು ತಬ್ಬಿ ಹಿಡಿದದ್ದು ಅನೈಚ್ಛಿಕವಾಗಿ ಸಡಿಲವಾಯಿತು. ಅಸುರನ ಅಂತರಂಗದಲ್ಲಿ ಉಲ್ಕೆ ಉರಿಯುವಂತಾಯಿತು. ಹುಬ್ಬು ಗಂಟಿಕ್ಕುತ, ಸಹೋದರನನ್ನುದ್ದೇಶಿಸಿ ನುಡಿದನು:

'ಯುದ್ಧವೊದಗಿ ಬಂದಿದೆ. ಮಹಾವೈರಿಯು ಸಮುದ್ರವನ್ನು ದಾಟುವ ಉಪಾಯವನ್ನು ಆಲೋಚಿಸುತ್ತಿರುವನು. ಎಳ್ಳನ್ನು ತೂಕ ಮಾಡಿ ಸರಿದೂಗಿಸುವ ಕಲೆಗೆ ಇದು ಸೂಕ್ತ ಸಮಯವಲ್ಲ. ನೀನು ಮಹಾವೀರ. ನಿನಗೆ ಬಾಣಗಳೆಲ್ಲವೂ ಬ್ರಹ್ಮಾಸ್ತ್ರಗಳು. ಕುಲವನ್ನು ಮತ್ತು ದೇಶವನ್ನು ಕಾಪಾಡುವುದು ಶೂರತನದ ಸಲ್ಲಕ್ಷಣ. ನಿನಗೆ ಮನಸ್ಸಿದ್ದರೆ ನೆರವಾಗು. ಇಲ್ಲದಿದ್ದರೆ, ಇಲ್ಲದಿದ್ದರೆ.' ಎಂದು ಒಂದೆರಡು ಕ್ಷಣ ನಿಧಾನಿಸಿ, ಕತ್ತರಿಸಿಕೊಳ್ಳುವವನಂತೆ ಮತ್ತೆ ದೃಢವಾಣಿಯಿಂದ ಹೇಳಿದನು:

'ರಾಜ ಶಾಸನವಿದ್ದರೂ, ಸೋದರರನ ಕೊಲೆಗೆ ಕಾರಣವಾಗುವ ಅಪಕೀರ್ತಿಗೆ ಹೇಸುತ್ತೇನೆ... ಮನಸ್ಸಿದ್ದರೆ ಸಹಾಯ ಮಾಡು. ಇಲ್ಲದಿದ್ದರೆ ಲಂಕೆಯನ್ನು ಬಿಟ್ಟು ಹೋಗು. ಬೇರೆಯ ವಾದಕ್ಕೆ ಇಲ್ಲಿ ಸ್ವಲ್ಪವೂ ಅವಕಾಶವಿಲ್ಲ.... ನನ್ನ ಮಾರ್ಗ ನನಗೆ; ನಿನ್ನದು ನಿನಗೆ!'

'ಕಟ್ಟಕಡೆಯ ನಿರ್ಣಯವೆ?'

'ಕೊಟ್ಟ ಕೊನೆ ನಿರ್ಣಯ.'

'ನಿನಗೆ ಒಳಿತಾಗಲಿ! ಸದ್ಬುದ್ಧಿ ಬರಲಿ! ತಂದೆಯ ತಪದ ಮಹಿಮೆಯಿಂದಲಾದರೂ ನಿನ್ನ ಆತ್ಮದ ಉದ್ಧಾರವಾಗಲಿ! ಇಲ್ಲಿಂದ ಹೋಗುತ್ತೇನೆ; ಇನ್ನು ಬೀಳ್ಕೊಡಿ.'

'ಎಲ್ಲಿಗೆ?'

'ಅನಿಶ್ಚಿತ.'

'ಕಡಲಾಚೆಯ ದಡದ ಕಡೆಗೊ?'

'ಅದರ ಅರ್ಥವೇನು?'

'ನಿನಗೆ ಗೊತ್ತಿದೆ; ನೀನೆ ಹೇಳಬೇಕು.'

'ನೀನಿಷ್ಟು ಕೀಳು ಮನಸ್ಸಿನವನೆಂದು ನನಗೆ ಇದುವರೆಗೆ ಗೊತ್ತಿರಲಿಲ್ಲ.'

'ಹೇಳು, ಆ ಅರಿವು ಪರಸ್ಪರವಲ್ಲವೆ?'

'ನಮಸ್ಕಾರ.'

ಎಂದು ಹೇಳಿ ವಿಭೀಷಣನು ಎದ್ದು ನಡೆದಿರಲು, ಅನಲೆಯು ಮೇಲೆದ್ದಳು. ಅದನ್ನು ನೋಡಿ ಒಡನೆಯೆ ಎಚ್ಚೆತ್ತ ರಾವಣನು ಹೇಳಿದನು:

'ಆಜ್ಞೆಯಿಂದ ಸಾಧ್ಯವಾದರೂ ಸಹ, ಇದನ್ನು ನಿನ್ನಲ್ಲಿ ಬೇಡಿಕೊಳ್ಳುತ್ತೇನೆ. ಈ ಸುಕುಮಾರಿ ಅನಲೆಯನ್ನು ಕರೆದುಕೊಂಡು ಹೋಗಿ ಕಷ್ಟಕ್ಕೀಡು ಮಾಡಬೇಡ.'

'ನನ್ನನ್ನು ಕ್ಷಮಿಸು. ತಂದೆಯ ಜೊತೆ ಹೋಗಿ ಧರ್ಮಕ್ಕೆ ಸೇವೆ ಸಲ್ಲಿಸುವೆ.'

'ಇಲ್ಲಿದ್ದೆ ಧರ್ಮದ ಸೇವೆ ಮಾಡು.'

ದೊಡ್ಡಪ್ಪನ ಮಾತಿಗೆ ಅನಲೆಯು ಪರಿಹಾಸ್ಯದಿಂದ ನುಡಿದಳು;

'ಧರ್ಮವನ್ನು ಹೊರಗೆ ಅಟ್ಟಿ, ಸೇವೆ ಸಲ್ಲಿಸುವುದು ಹೇಗೆ?'

ರಾವಣನು ಅವಳ ಕೈ ಹಿಡಿದುಕೊಂಡು ತನ್ನ ಮನದ ಭಾವವನ್ನು ಮಿಡಿದನು,

'ನನ್ನಂತಹವರನ್ನು ನಿನ್ನಂತಹವರು ತೊರೆದರೆ ಧರ್ಮ ಉದ್ಧಾರವಾಗುತ್ತದೆಯೆ? ನಿನ್ನ ತಂದೆಗಿಂತಲೂ ಹೆಚ್ಚಾಗಿ ನೀನು ನನಗೆ ಬೇಕು.'

'ಅಪ್ಪನ ಅಪ್ಪಣೆಯೆ ನನಗೆ ದಾರಿ.'

ಎಂದು ಆ ಹೆಣ್ಣು ಮಗಳು ತಂದೆಯ ಪಾದವನ್ನು ನೋಡುತ್ತ ನಿಂತಿದ್ದಳು. ಆಗ ವಿಭೀಷಣ ತುಸು ವಿಚಾರ ಮಾಡಿ ನುಡಿದನು.

'ನಿನ್ನ ದೊಡ್ಡಪ್ಪ ಹೇಳುವುದು ನಿಜ ಮಗಳೆ, ನೀನು ಇಲ್ಲಿರಬೇಕು. ಅದೇ ಸರಿಯಾದ ನೀತಿ.'

'ನಿನ್ನ ಸಾಮೀಪ್ಯವನ್ನು ಬಿಟ್ಟಿರಬೇಕೆ?'

ಎಂದು ಅನಲೆ ತಂದೆಯನ್ನು ಕೇಳಿದಳು. ತಕ್ಷಣ ರಾವಣನು,

'ನಿನಗೆ ತಡೆಯುಂಟೆ ಹೇಳಕ್ಕ? ನಿಮ್ಮಪ್ಪ ಎಲ್ಲಿದ್ದರೆ ಅಲ್ಲಿಗೆ, ಯಾವಾಗ ಬೇಕಾದರೂ ಹೋಗಿ ಬರಲು ಅನುಮತಿಯುಂಟು. ಜೊತೆಗೆ ಪುಷ್ಪಕ ವಿಮಾನವನ್ನು ಕೊಡುತ್ತೇನೆ.'

ಎಂದು ಹೇಳುತ್ತ ಅನಲೆಯ ಬಳಿ ನಿಂತನು. ವಿಭೀಷಣನು ಅಣ್ಣನ ಆ ದೈನ್ಯತೆಯಲ್ಲಿ ಉದ್ಧಾರಕ ಭಾವ ಬೀಜ ಕಂಡು ಹರ್ಷಿಸಿದನು. ಅರಮನೆಯ ಹೆಬ್ಬಾಗಿಲಿನಿಂದ ಹೊರ ಹೊರಟನು.

* * *

ಯುದ್ಧದ ಎರಡನೆಯ ದಿನ ರಣ ಸಂಗ್ರಾಮವನ್ನು ಕೊತ್ತಳದ ನೆತ್ತಿಯ ಮೇಲೆ ನಿಂತು ವೀಕ್ಷಿಸುತ್ತಿದ್ದ ರಾವಣನು ರಾಣಿ ಮಂಡೋದರಿಯ ಕರೆಯಂತೆ ಮಧ್ಯಾಹ್ನ ಊಟಕ್ಕೆ ಬಂದನು. ಚಿನ್ನದ ಮಣೆಯ ಮೇಲೆ ಚಿನ್ನದ ತಟ್ಟೆಯಲ್ಲಿ ಕಂಪು ಸೂಸುತ್ತಿರುವ ರಾಜ ಭೋಜನವನ್ನು ಯಾಂತ್ರಿಕವಾಗಿ ತಿನ್ನುತ್ತಿದ್ದನು. ಪತಿ ಸೇವೆಗಾಗಿ ಬಾಗಿ ಬೀಸಣಿಗೆಯಿಂದ ಗಾಳಿ ಬೀಸುತ್ತಿದ್ದ ಮಂಡೋದರಿಯು ಉದ್ವಿಗ್ನನು, ಚಿಂತಾಮಗ್ನನು ಆದ ಪತಿಯನ್ನು ನೋಡಿದಳು. ಹೆದರುತ್ತ, ಅಂಜುತ್ತ, ಆ ದಿನದ ರಣವಾರ್ತೆ ಕೇಳುವ ನೆವದಿಂದ ಮೆಲ್ಲನೆ ಮಾತು ತೆಗೆದಳು. ಅವನು ತಿಳಿದಷ್ಟನ್ನು ಸಂಗ್ರಹವಾಗಿ ಹೇಳಿದನು. ಆಗ ಅವನ ಹಣೆಯಲ್ಲಿ ಬೆವರು ಮೂಡಿದುದನ್ನು ನೋಡಿ ನಿಟ್ಟುಸಿರಿಟ್ಟಳು; ಕಣ್ಣೀರು ಚಿಮ್ಮಿತು. ವಿಧಿಯ ಲಿಖಿತವನ್ನು ಒರಸಲು ಆಶಿಸುವವಳಂತೆ ಬಟ್ಟೆಯಿಂದ ಅರಳೆ ಮೃದುವಾಗಿ ಅವನ ಹಣೆಯನ್ನು ಒತ್ತಿದಳು.

'ನನ್ನ ಹಣೆಯಿರಲಿ; ನಿನ್ನ ಕಣ್ಣೊರೆಸಿಕೊ ಲಂಕೇಶ್ವರಿ. ನಿನಗೇಕೆ ರಣಭೀತಿ? ಇಂದು ನಮ್ಮ ಸೈನ್ಯವು ಶತ್ರುವನ್ನು ದುರ್ಗದಿಂದ ವೇಲಾದ್ರಿ ಕಂದರಕ್ಕೆ ನೂಕದೆ ಹಿಂದಿರುಗುವುದಿಲ್ಲ. ಪ್ರಹಸ್ತನು ಸಮರ್ಥ ರಣ ಪಂಡಿತ, ಸಮಸ್ತ ಶಸ್ತ್ರಾಸ್ತ್ರ ಸಂಗ್ರಾಮದ ಒಡೆಯನಾದ ಅವನನ್ನು ಯುದ್ಧಕ್ಕೆ ಕಳುಹಿಸಿರುವೆ. ಹೀಗಿರುವಾಗ ರಮಣಿಯೆ, ಶತ್ರು ಭಯವೆಂದರೆ ನಗೆ ತರುತ್ತದಲ್ಲವೆ?'

'ನಿನ್ನ ಕೈ ಹಿಡಿದ ನನಗೆ ಆ ಅಳುಕೆ?'

'ಮತ್ತೇಕೆ ನಿಟ್ಟುಸಿರುಬಿಡುವೆ'

'ಇಂದು ಬೆಳಿಗ್ಗೆ ನೀನು ರಾಮನರ್ಧಾಂಗಿಯನ್ನು ಕಂಡುದು ಉಂಟಲ್ಲವೆ?'

'ಕಂಡುದುಂಟು. ಆ ಉಪವಾಸದ ಕೃಶಾಂಗಿಯನ್ನು.'

'ಹಿಂದೆ ಯಾವಾಗಲೂ ಹೀಗೆ ಏಕಾಂತ ಬಯಸಿ ಹೋದುದು ಇಲ್ಲ.'

‘ಅನಲೆಯಿದ್ದಳು! ತ್ರಿಜಟೆ ಹತ್ತಿರದಲ್ಲಿದ್ದಳು. ಅಲ್ಲಿ ಏಕಾಂತ ಎಲ್ಲಿಯದು? ಆಕೆಗೆ ಹೋದ ರಾತ್ರಿಯ ರಣದ ವಿಜಯವಾರ್ತೆ ಹೇಳಿದೆ. ನಿನ್ನ ಮಗನ ಮಾಯೆಗೆ ಸಿಕ್ಕಿ ಕಪಿಸೇನೆ ರಾಮಲಕ್ಷ್ಮಣ ಸಹಿತ ಭೂಮಿಗೆ ಒರಗಿದುದನ್ನು ಹೇಳಿದೆ. ಆ ಹೊಟ್ಟೆಗಿಲ್ಲದೆ ಮಿದುಳು ಕದಡಿದ ಭ್ರಾಂತಳು ಹುಚ್ಚು ನಗೆ ನಕ್ಕಳು!’

‘ನನಗೆ ಅನಲೆ ಬೇರೊಂದು ಕಥೆ ಹೇಳಿದಳು.’

ಎಂದು ನುಡಿದ ರಾಣಿಯ ಮುಖ ಭಾವವನ್ನು ದೀರ್ಘ ಕಾಲ ದಿಟ್ಟಿಸಿ ನೋಡಿದನು. ತನ್ನ ಅಂತರಂಗವನ್ನು ತೆರೆದಿಡುವಂತೆ ಮಾತಾಡಿದನು. ಆಗ ಅಸುರನ ಮುಖವು ಕಲಕಿದ ಕೊಳವಾಗಿತ್ತು.

‘ರಾಣಿಯೆ, ಕಳೆದ ರಾತ್ರಿ ನನಗೊಂದು ಕನಸಾಯಿತು. ಅದರಲ್ಲಿ ಮತ್ತೆ, ಆ ಭೀಕರ ದೃಶ್ಯವನ್ನು ನೋಡಿದೆ. ನಿರ್ಭಾಗ್ಯೆ ವೇದವತಿ ಚಿತೆಯೇರಿದ್ದು ಕಂಡೆ. ನೋಡುತ್ತಿದ್ದಂತೆ ಆ ಸುಂದರಿಯ ತನು ರೂಪರಾಶಿಯು ಭಸ್ಮವಾಯಿತು. ಅದರ ಮೇಲೆ ಮೃದುವಾದ ಗಾಳಿ ಬೀಸಿತು. ಆ ಮೃತ ಭಸ್ಮರಾಶಿಯಿಂದ ನೆಟ್ಟನೆ ಮನೋಹರವಾದ ಅಮೃತ ಮೂರ್ತಿಯೊಂದು ಮೂಡಿತು. ಆ ಮೂರ್ತಿಯಲ್ಲಿ ಈ ಮಹಾತಪಸ್ವಿನಿ ಸೀತೆಯನ್ನು ಗುರುತಿಸಿದೆ. ಕಾರಣವೇನೆಂದು ತಿಳಿಯದೆ ನಡುಗಿ ಕಣ್ಣು ತೆರೆದೆ. ಮೈ ಬೆವರಿತ್ತು. ಸ್ವಪ್ನ ಚೇಷ್ಟೆಯನ್ನು ಕಂಡು ನನ್ನೊಳಗೆ ನಾನು ನಕ್ಕೆ! ಹುಸಿಯ ಕನಸಿನ ಶಂಕೆಯನ್ನು ನಿವಾರಿಸಲು ಹೋಗಿ ಜನಕಜಾತೆಯನ್ನು ಕಂಡೆ. ಕೃಶಾಂಗಿಯನ್ನು ನೋಡಿದ ಮೇಲೆ ನನ್ನ ಸಂದೇಹ ದೂರವಾಯಿತು. ಇವಳೆಲ್ಲಿ? ಅವಳೆಲ್ಲಿ? ಮತಿ ನಿದ್ದೆ ಮಾಡುವಾಗ ಮಿದುಮಿದುಳು ಈ ವಿಕಾರಗಳನ್ನು ಕಡೆದು ಎಬ್ಬಿಸುತ್ತದೆ!’

‘ಪ್ರಭೂ, ಮನದ ಆಳದಿಂದ ಆತ್ಮ ಧರ್ಮವು ನೀಡುವ ಎಚ್ಚರಿಕೆಯು ಕನಸಿನ ರೂಪದಲ್ಲಿ ಬರುತ್ತದಲ್ಲವೆ? ನಿದ್ರೆಯ ಕೃಪೆಯಿಂದ ನಿನ್ನ ಅಂತರಾತ್ಮವು ಅಹಂಕಾರದಿಂದ ಬಿಡುಗಡೆ ಪಡೆದಿದೆ. ಅದರ ಶುದ್ಧ ಸಂದೇಶವನ್ನು ದಿಕ್ಕರಿಸಬೇಡ. ನಮ್ಮ ಸೈನ್ಯವು ಕ್ಷಯಿಸುತ್ತಿರುವುದು ಕಪಿಸೈನ್ಯದಿಂದಲ್ಲ, ಪತಿವ್ರತೆಯ ದೈನ್ಯದಿಂದ’

ರಾವಣನ ಕಣ್ಣು ಅವಳ ಕಣ್ಣನ್ನು ದಿಟ್ಟಿಸಿ ನೋಡುತ್ತಿರಲು, ಮಹಾರಾಣಿ ಮಾತು ಮುಂದುವರಿಸಿದಳು.

‘ನನಗೆ ಅನಲೆ ಹೇಳಿದುದನ್ನು ಹೇಳುತ್ತೇನೆ. ಅದು ನೀನು ಕಂಡ ಕನಸಿಗಿಂತ ಹೆಚ್ಚಿನದು. ತ್ರಿಜಟೆ ತನ್ನ ಕೆಲಸವನ್ನು ಮುಗಿಸಿ ಮಲಗಿದಳಂತೆ. ಸೀತಾದೇವಿಯು ಕಣ್ಣು ಮುಚ್ಚದೆ ಭೀಷ್ಮ ಮೌನಿಯಾಗಿ ಅಂತರ್ಮುಖತೆಯಿಂದ ಯೋಗಿನಿಯಾಗಿದ್ದಳಂತೆ. ಆಗ ಅನಲೆಯ ಕಣ್ಣಿಗೆ ಅನುಪಮ ಜ್ಯೋತಿಯೊಂದು ಪರ್ಣಶಾಲೆಯನ್ನು ತುಂಬಿದಂತಾಯಿತಂತೆ. ಅವಳು ರೋಮಾಂಚಿತಳಾಗಿ ನೋಡುತ್ತಿರಲು – ಬಾಹ್ಯ ಸಂಜ್ಞಾ ಶೂನ್ಯಳಾದ ಸೀತೆಯು ಯಾರೊಡನೆಯೊ ಮಾತಾಡಿದಂತೆ ಸಂವಾದಕ್ಕೆ ತೊಡಗಿದಳಂತೆ. ಆ ಪೂಜ್ಯೆಯು ಅಲ್ಲಿದ್ದು ಎಲ್ಲೆಲ್ಲಿಯೊ ಚಲಿಸುತ್ತಿದ್ದಂತೆ; ಅಲ್ಲಿದ್ದು ಎಲ್ಲವನ್ನು ನೋಡುತ್ತಿದ್ದಂತೆ; ಅಲ್ಲಿ ತಟಸ್ಥಳಾಗಿದ್ದರೂ ದೂರವಿದ್ದು ಇತರ ಜಗತ್ ಕ್ರಿಯಾ ಚಕ್ರವನ್ನು ನಡೆಸುವಂತೆ ಗೋಚರಿಸಿದಳಂತೆ, ಅದನ್ನು ಕಂಡು ಅನಲೆ ಭಯಭೀತಳಾಗಿ ಮೈ ಮರೆತಳಂತೆ!

'ಅನಂತರ ಆ ಪತಿವ್ರತೆಯ ಕೈ ಸೋಂಕಿಗೆ ಅನಲೆ ಕಣ್ತೆರೆಯಲು, 'ಮಗಳೆ, ನೀನು ಕಂಡ ದೈವಿಕವಾದುದಕ್ಕೆ ಭಯಗೊಳ್ಳಬೇಡ. ನಿನ್ನ ತಂದೆಯ ಉಪಕಾರದಿಂದ ನನ್ನ ತಾಳಿ ಉಳಿದಿದೆ. ಪ್ರಭುರಾಮಚಂದ್ರನಿಗೆ ಒಂದು ಕಂಟಕ ಕಳೆಯಿತು.' ಎಂದು ಹೇಳಿ ಸಂತೈಸಿದಳಂತೆ. ಆ ಪಾವನೆಯ ಪಾದಗಳಿಗೆ ನಮ್ಮ ಅನಲೆ ನಮಿಸಿದಳಂತೆ.'

ಸತಿಯ ಮಾತನ್ನು ಕೇಳಿ ನಿಟ್ಟುಸಿರುಬಿಡುತ್ತ ದಶಶಿರನು ಹೇಳಿದನು:

'ಅನಲೆ! ನಮಗೆ ನಿಜವಾಗಿಯೂ ಅನಲೆ (ಬೆಂಕಿ)ಯೆ! ರಾಮ ಪಕ್ಷಕ್ಕೆ ತಂದೆ; ಸೀತೆಯ ಪಕ್ಷಕ್ಕೆ ಮಗಳು! ಇವರಿಬ್ಬರೂ ದ್ರೋಹಿಗಳು! ಅಕ್ಕರೆಯೆ ನನಗೆ ಇಕ್ಕಿದ ಉರಿಯಾಯಿತು!

'ಬೇಡವೆಂದೆ. ಬಿಡದೆ ಕೇಳಿಕೊಂಡಳು; ಕಾಡಿದಳು. ನೋಡಿಬರುವ ಆಸೆಗೆ ಒಪ್ಪಿಗೆ ಕೊಟ್ಟೆ. ಅಶೋಕವನದಲ್ಲಿಯೆ ಮನೆ ಮಾಡಿದಳು! ಕಟ್ಟುಕತೆಗಳನ್ನು ಕಟ್ಟಿ, ಕಣ್ಣಾರೆ ನೋಡಿದೆ ಎಂದು ಹೇಳುತ್ತ, ಮತಿಗೆಟ್ಟು ನಂಬುತ್ತಾಳೆ. ಇತರರನ್ನು ನಂಬಿಸುತ್ತಾಳೆ! ಹೆಂಗಸರಲ್ಲಿ ಅಧೈರ್ಯವನ್ನುಂಟು ಮಾಡುತ್ತಾಳೆ! ಆ ಹುಡುಗಿ ಬೆಪ್ಪಾಗಿ ಹೇಳಿದುದನ್ನೆಲ್ಲಾ ನೀನು ಒಪ್ಪಿದೆಯಲ್ಲಾ, ಅದೇ ನನಗೆ ಸೋಜಿಗ! ಶತ್ರು ನಿನ್ನೆ ಬದುಕಿದ. ನಿನ್ನ ತಲೆಗೆಟ್ಟ ಅನಲೆಯು ಕಟ್ಟಿರುವ ಕತೆ ಪೊಳ್ಳಾಗುವುದನ್ನು ನೀನು ಇಂದಿನ ಯುದ್ಧದಲ್ಲಿ ಕಾಣುವೆ!'

ಪತಿಯ ನುಡಿ ಕೇಳುತ್ತ ಮಂಡೋದರಿಯು – ಕುವರಿ ಅನಲೆ ಸೀತೆಯ ಸಾನ್ನಿಧ್ಯದಿಂದ ಭಾವದೌನ್ನತ್ಯದಲ್ಲಿ ವಿಕಾಸಗೊಳುತ್ತಿರುವುದನ್ನು ನೆನೆದು ಸಮಾಧಾನಚಿತ್ತಳಾದಳು.

* * *

ಸೀತೆಯು ಸಾಗರದ ದೂರ ತೀರದಲ್ಲಿ ಏಳುತ್ತಿದ್ದ ಧೂಮದುಶ್ಶಕುನ ದೃಶ್ಯವನ್ನು ನೋಡಿದಳು. ಹೊಗೆ ತುಂಬಿದ ಆಗಸದಲ್ಲಿ ಆಗತಾನೆ ಮೂಡಿಬರುತ್ತಿದ್ದ ಸೂರ್ಯಬಿಂಬ ಮಸುಕಾಗಿತ್ತು. ಅಶೋಕವನ ಮಧುಧಾಮವನ್ನು ಹೊಗೆಯ ಮಬ್ಬಿನ ಬಿಂಕವು ಆವರಿಸಿತ್ತು. ಕಮಟು ವಾಸನೆಯು ಮೂಗಿಗೆ ಅಸಹ್ಯವಾಗಿ ಬೀಸುತ್ತಿತ್ತು. ಹೆಣದ ಹೊಗೆಗೆ ಹೇಸಿದಂತೆ ದುಂಬಿಗಳು ಪಕ್ಷಿಗಳು ಮೂಕವಾಗಿದ್ದವು. ಅದನ್ನು ನೋಡುತ್ತ ಸೀತೆಯು ಸಖಿ ತ್ರಿಜಟೆಯನ್ನು ಆ ಹೊಗೆಯ ಕಾರಣ ಕೇಳಿದಳು.

ಆಗ ಸಖಿಯು ಯುದ್ಧದ ಭೀಕರತೆಯನ್ನು ತಿಳಿಸುತ್ತ ನಿನ್ನೆ ದಾನವೇಂದ್ರನ ತಮ್ಮ ಕುಂಭಕರ್ಣನು ವಾನರರ ಪಡೆಗಳನ್ನು ಸದೆಬಡಿದು ಹೋರಾಡುತ್ತ ಮಡಿದನು. ಮಡಿದ ಸೈನಿಕರ ಹೆಣಗಳನ್ನು ರಾಶಿ ಮಾಡಿ ಸುಡುತ್ತಿದ್ದಾರೆ. ತನ್ನ ತಂದೆ ತಲೆಯೊಡೆದು ಸತ್ತ. ಅಣ್ಣ ಕಾಲು ಮುರಿದು ಏಳಲಾಗದೆ ಇದ್ದಾನೆ. ಮನೆಮನೆಯಲ್ಲಿ ಲಂಕೆ ಅಳುತ್ತಿದೆ ಎಂದು ಹೇಳಿದಳು. ಸೀತೆಯು ತಾನು ಲೋಕದ ಸಂಕಟಕ್ಕೆ ಕಾರಣನಾದೆನಲ್ಲ ಎಂದು ದುಃಖಿಸಿ ತ್ರಿಜಟೆಯೊಡನೆ ನೋವನ್ನು ಹಂಚಿಕೊಳ್ಳುತ್ತಿದ್ದಳು.

ಆ ಕಡೆ ವಿಭೀಷಣ ಕುಮಾರಿ ಅನಲಾದೇವಿಯು ಕಾಳಗದ ಕಣಕ್ಕಿಂತಲೂ ಮಿಗಿಲಾದ ಭಯಂಕರ ಶೋಕಸಾಗರದ ಸೀಮೆಯಾಗಿದ್ದ ದೊಡ್ಡಪ್ಪ ರಾವಣನ

ಅರಮನೆಯಲ್ಲಿದ್ದಳು. ಅವಳು ಅದನ್ನು ಬಿಟ್ಟು ಮನಶ್ಶಾಂತಿಯನ್ನು ಅರಸುತ್ತ ಅಶೋಕ ಧಾಮವನ್ನು ಹೊಕ್ಕಳು. ನೇರವಾಗಿ ಸೀತೆಯ ಸಾನಿಧ್ಯಕ್ಕೆ ಸಾಗಿದಳು. ಆ ತಪಸ್ವಿನಿಯ ಪಾದಗಳಿಗೆ ಎರಗಿದಳು. ಸೀತೆಯು ದುಃಖಪೂರಿತ ಕಣ್ಣುಗಳ, ಗದ್ಗದ ಧ್ವನಿಯ ಶೋಕ ಆವರಿಸಿದ ಸುಕೋಮಲಾಂಗಳನ್ನು ಕನಿಕರದಿಂದ ತಾಯಿ ಮಗಳನ್ನು ಎತ್ತಿಕೊಳ್ಳುವಂತೆ ಎತ್ತಿಕೊಂಡಳು. ಕಣ್ಣೀರು ಒರೆಸಿದಳು; ಮುಖವನ್ನು ಮುದ್ದಾಡಿದಳು; ಅವಳ ಒಡಲನ್ನು ತನ್ನ ಮೈಗೆ ಅಪ್ಪಿಕೊಂಡು ಕಣ್ಮುಚ್ಚಿ ಮೌನಿಯಾದಳು. ಅದು ತನ್ನ ಹೃದಯದ ನಿಗೂಢ ಶಾಂತಿಯನ್ನು ಯೌಗಿಕ ವಿಧಾನದಿಂದ ಅನಲೆಯ ಆತ್ಮಕ್ಕೆ ದಾನ ಮಾಡುವ ರೀತಿಯಾಗಿತ್ತು. ತುಸು ಸಮಯದ ನಂತರ ತನ್ನ ಅಳಲನ್ನು ಹೀಗೆ ತೋಡಿಕೊಂಡಳು;

'ಅನಲೆ ನಿನ್ನನ್ನು ಹೇಗೆ ಸಂತೈಸಲಿ? ನೀನು ಅಳಬೇಡ ಎಂದು ಹೇಳಲು ನನಗೆ ಬಾಯಿ ಬರುತ್ತಿಲ್ಲ. ತಾಯಿ, ಬಾಯಿ ಬರುತ್ತಿಲ್ಲ.'

ಬೈತಲೆಯ ಅಕ್ಕಪಕ್ಕದ ಕೂದಲನ್ನು ನೇವರಿಸುತ್ತಿದ್ದವಳನ್ನು ಮುಗ್ಧ ನೇತ್ರದ ತರಳೆ ಮುಖವೆತ್ತಿ ನೋಡಿದಳು. ತನ್ನ ಚಿಗುರು ಬೆರಳುಗಳಿಂದ ಸೀತೆಯ ಕಣ್ಣಿನ ಹನಿಗಳನ್ನು ಒರಸುತ್ತ ಹೇಳಿದಳು:

'ದೇವಿಯೇ, ನಿನ್ನ ದುಃಖವನ್ನು ಅತ್ತು ಮುಗಿಸಲು ನಿನಗೆ ನಿನ್ನ ಕಣ್ಣೀರು ಸಾಲದಾಗಿದೆ. ನನ್ನ ಅಳಲಿಗೆ ನಿನ್ನ ನೇತ್ರ ತೀರ್ಥವನ್ನೇಕೆ ಸುರಿಸುವೆ? ನಿನ್ನ ನಯನದಿಂದ ಉರುಳುವ ಒಂದೊಂದು ಅಶ್ರು ಬಿಂದುವು ನಮ್ಮ ಲಂಕೆಯ ಶೋಕ ಜೀವನ ಸಾಗರವನ್ನು ಹೆಚ್ಚಿಸುವುದು. ನೀನು ದುಃಖಿಸಿದರೆ ಅದರ ಒಂದೊಂದು ಹನಿಯು ಬಡಬಾಗ್ನಿಯ ಕಡಲಾಗುವುದು. ಅದು ಲಂಕೆಯ ಮಹಾ ಅಸುರರ ಸಹಸ್ರಾರು ವಾಹಿನಿಗಳನ್ನು ಕುಡಿದು ಮುಗಿಸುವುದು. ಸಕಲ ಲೋಕ ಭೀಕರನೆಂದು, ಯುದ್ಧ ಭೈರವನೆಂದು ಹೆಸರಾದವನು ನನ್ನ ಚಿಕ್ಕ ದೊಡ್ಡಪ್ಪ ಕುಂಭಕರ್ಣ. ಅವನು ನೇರ ಮತ್ತು ಸವಿನುಡಿಯಲ್ಲಿ ಹಿರಿದಾಗಿ ಬಾಳಿದವನು. ಅಮ್ಮ, ನಿನ್ನ ಕಣ್ಣಿನ ಹನಿ ಕಡಲ ಬಡಬಾಗ್ನಿ ನಿನ್ನೆ ಅವನನ್ನು ನುಂಗಿ ಹಾಕಿತಮ್ಮ!'

ಎಂದು ಹೇಳುತ್ತ ಅನಲೆಯು ದುಃಖ ತಡೆಯಲಾರದೆ ಬಿಕ್ಕಿ ಬಿಕ್ಕಿ ಅತ್ತಳು. ತುಸು ತಡೆದು ಮತ್ತೆ ಮಾತು ಮುಂದುವರಿಸಿದಳು.

'ಆ ದೊಡ್ಡಪ್ಪ ನಮ್ಮೊಡನೆ ಎಷ್ಟೋ ಸಲ ಕುಳಿತು ಸರಸದಲ್ಲಿ ಆಡುತ್ತಿದ್ದ. ನಗೆ ಚಟಾಕಿ ಹಾರಿಸಿ ನಮ್ಮನ್ನು ಅಣಗಿಸುತ್ತ ಅಳ್ಳೆ ಬಿರಿಯುವಂತೆ ನಗಿಸುತ್ತಿದ್ದ! ಕಳ್ಳರ ಆಟದಲ್ಲಿ ನಾವು ಅವನನ್ನು ಅಟ್ಟಿಸಿಕೊಂಡು ಹೋಗಲು ಅವನು ಓಡುತ್ತಿದ್ದ. ನಾನು ಅವನ ಹಿಂದೆ ಓಡುತ್ತ, ಹಿಡಿಯಲು ಆಗದಿದ್ದಾಗ, ಹಿಂತಿರುಗಿ ನೋಡುತ್ತ ಕೊನೆಕೊನೆಗೆ ನಗೆ ತಡೆಯಲಾರದೆ ಸೋತಂತೆ ನಿಲ್ಲುತ್ತಿದ್ದ. ನಾನು ಮುಟ್ಟಿ ನಗುತ್ತಿದ್ದೆ. ನನ್ನನ್ನು ಆಕಾಶಕ್ಕೆ ಎತ್ತಿ ಮೇಲಸೆದು ಹಿಡಿದು 'ನೀನೊಂದು ಹೂವಿನ ಚೆಂಡು' ಎಂದು ಹೇಳಿ ಮುದ್ದಾಡುತ್ತಿದ್ದ. 'ಚೆಂಡು ಹೂ! ಚೆಂಡು ಹೂ!' ಎಂದು ಹೇಳಿ ಅಟ್ಟಹಾಸದಿಂದ ಅದ್ಭುತವಾಗಿ ನಗುತ್ತಿದ್ದ! – ಅಯ್ಯೊ, ಆ ಚಿಕ್ಕ ದೊಡ್ಡಪ್ಪ ಇಂದು ಸಮುದ್ರದ ಮಳಲಿನ

ತೀರದಲ್ಲಿ ಗಂಧ ಚಿತೆಯಲ್ಲಿ ಬೆಂದು ಹೋದ. ನನ್ನ ಬದುಕಿರುವ ದೊಡ್ಡ ದೊಡ್ಡಪ್ಪ ಅಸುರೇಶ್ವರನು ಅವನ ಬೂದಿಯನ್ನು ಊರಿಗೆ ತಂದನು! ಅದನ್ನು ಇಟ್ಟಿರುವ ರತ್ನ ಪಾತ್ರೆಯನ್ನು ಬಿಗಿದಪ್ಪಿಕೊಂಡು 'ತಮ್ಮ, ತಮ್ಮ' ಎಂದು ಗೋಳಿಡುತ್ತಿದ್ದನು. ಅದನ್ನು ನಾನು ನೆನೆಯಲಾರೆನು ದೇವಿ. ನಿನಗೆ ಅಹಿತನಾಗಿದ್ದರೇನು? ಆ ನೋಟವನ್ನು ನೋಡಿದ್ದರೆ ನೀನೂ ಸಹ ಮರುಗಿ ಕರಗಿ ಹೋಗುತ್ತಿದ್ದೆ!'

ಜಾನಕಿಯ ಎದೆಗೆ ಮುಖವಿಟ್ಟು, ಗದ್ಗದಿತೆಯಾಗಿ ಮಗಳಂತೆ ಅನಲೆ ಅಳುತ್ತಿದ್ದಳು. ಅದನ್ನು ನೋಡುತ್ತ ತನ್ನ ನಿಜಸ್ವರೂಪವೆ ಆವಿರ್ಭವಿಸಿದಂತೆ ಸೀತೆಯು ತಾನು ಬೇರೆ ಎಂಬ ಭಾವ ತೊರೆದಳು. ಲೋಕದ ಮಾತೆ ತಾನು ಎಂಬಂತೆ ತನ್ನ ಎರಡು ತೋಳುಗಳಿಂದ ಅನಲೆಯನ್ನು ತಬ್ಬಿಕೊಂಡಳು. ತ್ರಿಜಟೆಯ ಕಡೆ ತಿರುಗಿ,

'ತ್ರಿಜಟೆಯೆ, ಬಾಲೆಯು ಉಪವಾಸವಿದ್ದಾಳೆ. ಶೋಕಭಾರವನ್ನು ತಡೆಯಲಾರದವಳಾಗಿದ್ದಾಳೆ; ತತ್ತರಿಸುತ್ತಿದ್ದಾಳೆ. ಇವಳಿಗೆ ಈ ಹರೆಯದಲ್ಲಿ ಇಂತಹ ದುಃಖವೆ? ಬೇಗ ಹೋಗಿ ಹಣ್ಣುಗಳನ್ನು, ತಿಳಿನೀರನ್ನು ತೆಗೆದುಕೊಂಡು ಬಾ.'

ಎಂದು ಹೇಳಿದಳು. ಅವಳು ಹೋದನಂತರ ಸೀತೆ ಅನಲೆಯ ತಲೆಗೆ ತನ್ನ ತೊಡೆಯನ್ನು ತಲೆದಿಂಬಾಗಿಸಿ ಮಲಗಿಸಿಕೊಂಡಳು. ಕೃಶಗಾತ್ರೆಯು ತನ್ನ ಮಲಿನ ವಸ್ತ್ರದ ಸೆರಗಿನಿಂದ ತಂಗಾಳಿ ಬೀಸಿದಳು. 'ಏನು ಬೇಸಗೆಯೊ? ಬೇಗೆ ಲೋಕವನ್ನು ಧಗಿಸುತ್ತಿದೆ.' ಎಂದು ತನಗೆ ತಾನು ಹೇಳಿಕೊಂಡು ನಿಟ್ಟುಸಿರುಬಿಟ್ಟಳು. ಮುಂದೆ ಹಬ್ಬಿರುವ ಸಾಗರದ ನೀಲ ವಿಸ್ತಾರವನ್ನು ನೋಡುತ್ತ ನೀಲಿಯಾಗಸದ ನಿಸ್ಸೀಮ ವಿಸ್ತಾರದ ಕಡೆಗೆ ಗಮನ ಹರಿಸಿದಳು. ಮುಗಿಲು ಮುಗಿಲಾಗಿ ಮೇಲೇರುತ್ತಿದ್ದ ದಹನ ಕ್ರಿಯಾ ಧೂಮ ವಿಸ್ತಾರವನ್ನು ನೋಡುತ್ತಿದ್ದ ಅವಳ ಕಣ್ಣಿಂದ ಹನಿ ತುಳುಕಿ ಅನಲೆಯ ಮೈ ಮೇಲೆ ಬಿದ್ದಿತು!

ತ್ರಿಜಟೆಯು ಬೇಗನೆ ಬಂದು ನೀಡಿದ ತಣ್ಣನೆಯ ನೀರಿನಿಂದ ಅನಲೆಯು ಮುಖ ತೊಳೆದಳು. ಹಣ್ಣುಗಳನ್ನು ಸೇವಿಸಿ ಚೇತರಿಸಿಕೊಂಡಳು. ಅನಂತರ ಸೀತೆಗೆ ಹೀಗೆ ಹೇಳಿದಳು:

'ದೇವಿಯೆ, ಆದದ್ದು ಆಗಿ ಹೋಗಿದೆ. ಅದಕ್ಕೂ ನೂರರಷ್ಟು ಘೋರವು ಇನ್ನೂ ಆಗಲಿದೆ. ನೀನು ಇಚ್ಛಿಸಿದರೆ ಅದನ್ನು ನಿಲ್ಲಿಸಲು ಅಸಾಧ್ಯವೇನೂ ಇಲ್ಲ. ತಾಯಿ, ಅರಮನೆಯಲ್ಲಿ ನಡೆದುದನ್ನು ಹೇಳುತ್ತೇನೆ ಕೇಳು. ಕಡಲ ತೀರದಲ್ಲಿ ತಮ್ಮನ ಕಳೆಬರಕ್ಕೆ ಕೊನೆಯ ಸಂಸ್ಕಾರ ಮಾಡಿ, ಭಸ್ಮಾವಶೇಷವನ್ನು ರತ್ನ ಪಾತ್ರೆಯಲ್ಲಿಟ್ಟು ತಂದು ಗೋಳಿಡುತ್ತಿದ್ದ ದೊಡ್ಡಪ್ಪನನ್ನು ನನ್ನ ಅಣ್ಣ ಇಂದ್ರಜಿತು ಕಂಡ. ಅವನು ಮಹಾರುದ್ರ ಕೋಪಾವಿಷ್ಟನಾಗಿ ತನ್ನ ತಂದೆಯನ್ನು ಸಂತೈಸುತ್ತ ಹೀಗೆ ಭಯಂಕರ ಪ್ರತಿಜ್ಞೆಯನ್ನು ಮಾಡಿದ.

'ದೈತ್ಯಕುಲ ಚಕ್ರೇಶನೆ, ಸಂತಾಪವನ್ನು ಬಿಡು. ನನ್ನ ಪ್ರತಾಪ ಭೂತಕ್ಕೆ ಚಿಕ್ಕಯ್ಯನ ಪ್ರಾಣದ ನೂರರಷ್ಟು ಪ್ರಾಣಗಳನ್ನು ಬಲಿ ತೆಗೆದುಕೊಳ್ಳುತ್ತೇನೆ. ವೈರಿ ಸೈನ್ಯವನ್ನು ಯಮನೂರಿನ ಅತಿಥಿಯಾಗಿಸುತ್ತೇನೆ. ಇದಕ್ಕೆ ನನ್ನಾಣೆ, ನಿನ್ನಾಣೆ,

ತೀರಿಹೋದ ಚಿಕ್ಕಪ್ಪನಾಣೆ, ನನ್ನ ಹೆತ್ತ ಅವ್ವನ ಮತ್ತು ಕುಲದೈವ ಶಿವನಾಣೆ! ಈಗಲೇ ನಿಕುಂಭಿಲಾ ಯಾಗವನ್ನು ಕೈಗೊಳ್ಳುತ್ತೇನೆ. ಮೃತ್ಯುಗರ್ಭವು ತರತರನೆ ನಡುಗುವಂತೆ ಮಾರಣ ಮಹಾಶಕ್ತಿಗಳನ್ನು ತಕ್ಷಣ ಸೃಷ್ಟಿಸುತ್ತೇನೆ. ಪೂಜ್ಯ ಕುಂಭಕರ್ಣನ ಪ್ರೇತವು ಪಿತೃಲೋಕದಲ್ಲಿ ಸುಪ್ರೀತವಾಗುವಂತೆ ನರವಾನರರ ಸೇನೆಯನ್ನು ನಿರ್ನಾಮ ಮಾಡಿ ಅವರ ರಕ್ತದಿಂದ ತರ್ಪಣವನ್ನು ಅರ್ಪಿಸುತ್ತೇನೆ ಎಂದು ಕಠೋರ ಶಪಥವನ್ನು ಮಾಡಿದನು. ನಿಕುಂಭಿಲಾ ಹೆಸರಿನ ಆಲದ ಮರದ ಬುಡದಲ್ಲಿಯ ಯಾಗ ಶಾಲೆಯ ಮಹಾಮಂತ್ರ ಕರ್ಮದ ತಂತ್ರಮಂಟಪದತ್ತ, ನಡೆದನು.

'ಆ ನನ್ನ ಅಣ್ಣನು ಅತಿಶಕ್ತಿಯುತನು. ಇಂದ್ರನನ್ನು ಗೆದ್ದು, ಬ್ರಹ್ಮನಿಂದ ನಾನಾವರಗಳನ್ನು ಪಡೆದು, ಮಯಾಬಲದಿಂದ ದೇವದಾನವರಿಗೆ ಭಯಂಕರನಾಗಿರುವವನು. ದೇವಿ, ಅವನು ನಿರ್ವಿಘ್ನವಾಗಿ ಯಾಗವನ್ನು ಮುಗಿಸಿದರೆ ಈ ಭುವನ ತ್ರಯದ ವೀರರಲ್ಲಿ ಯಾರಿಗಾದರೂ ಅವನನ್ನು ಸೋಲಿಸಲು ಸಾಧ್ಯವೆ? ಆ ಯಾಗವು ವಿಘ್ನವಿಲ್ಲದೆ ಸಿದ್ಧಿಯಾದರೆ ಅವನು ಅಜೇಯನು, ಯಾರೂ ಎದುರಿಸಲಾಗದ ವೀರನು ಆಗುತ್ತಾನೆ. ಆಗ ಕಪಿಧ್ವಜರು ಯಾವ ಲೆಕ್ಕ? ತಾಯಿ, ಅನಂತರ ಎರಡೂ ಕಡೆಯಲ್ಲಿ ಆಗುವ ಪ್ರಾಣ ಹತ್ಯೆಯನ್ನು ನೆನೆಯಲಾಗದು.'

ಎಂದು ಹೇಳಿ ತುಸುಹೊತ್ತು ಮೌನವಾಗಿ ಆಲೋಚಿಸಿ ಮಾತನ್ನು ಮುಂದುವರಿಸಿದಳು:

'ಗಂಡಸರು ಹೀಗೆ ಮೈ ಮರೆತು ಕ್ರೋಧ ಮೂರ್ಛಿತರಾಗಿ ಉದ್ಧಟತನದಿಂದ ಸರ್ವನಾಶಕ್ಕಾಗಿ ಒಬ್ಬರಿಗೊಬ್ಬರು ಎದುರಾಗುವಾಗ ಹೆಣ್ಣಾದವಳು ಏಕೆ ತಟಸ್ಥಳಾಗಿರಬೇಕು? ಶ್ರೇಷ್ಠಳೇ, ನೀನು ಒಪ್ಪಿದರೆ ನಾನು ನಿನಗೆ ನೆರವಾಗುತ್ತೇನೆ. ಮಂಡೋದರಿ ದೊಡ್ಡಮ್ಮನು ಸಹಾಯಕ್ಕೆ ಬರುತ್ತಾಳೆ ಎಂದು ನನಗೆ ಗೊತ್ತು. ನನ್ನ ಅತ್ತಿಗೆಯಾದ ಮೇಘನಾದನ ಪತ್ನಿ ತಾರಾಕ್ಷಿಯು ಬೆಂಬಲಿಸುತ್ತಾಳೆ. ತಾಯಿ ಕೇಳು, ನಿನ್ನನ್ನು ಇಲ್ಲಿಗೆ ತರಲು ಸಂಚು ಹೂಡಿದ ಚಂದ್ರನಖಿಯೂ ಈಗ ಬದಲಾಗಿದ್ದಾಳೆ. ಮತ್ತು ದಶಗ್ರೀವನ ಆತ್ಮವು ತನ್ನ ಕಸುಗಾಯಿಯ ಒಗರನ್ನು ಕಳೆದುಕೊಂಡು ಹಣ್ಣಾಗಲು ಮಾರ್ಪಾಡುತ್ತಿರುವುದು ನನ್ನ ಮನಸ್ಸಿಗೆ ಗೋಚರವಾಗುತ್ತಿದೆ. ಆದರೂ ಆ ಮಹಾಸತ್ವನು ಅತ್ಯಭಿಮಾನಿ, ಹಿಂಜರಿಯುವವನಲ್ಲ. ಈ ಕಾಳಗದ ಕೊಲೆಯನ್ನು ತಡೆಯಲು ತಾನೇ ಮುಂದುವರಿಯುವುದಿಲ್ಲ. ರೋಷಾವೇಶಿಯಾದ ಅವನು ಕ್ಷಾತ್ರ ತೇಜಕ್ಕೆ ಭಂಗ ಬರುವ ರೀತಿಯಲ್ಲಿ ಎಂದೂ ನಡೆದುಕೊಳ್ಳುವುದಿಲ್ಲ.'

'ಅನಲೆಯೆ, ಈ ಪುಟ್ಟ ಹೃದಯದಲ್ಲಿ ಅದು ಹೇಗೆ ಇಷ್ಟು ದಿಟ್ಟತನವನ್ನಿರಿಸಿಕೊಂಡಿರುವೆ? ಹದಿನಾರು ವಸಂತಗಳ ನಿನ್ನ ಮೈ ಹಿರಿಯ ಚೈತನ್ಯದ ನೆಲೆ ಮತ್ತು ಅತಿಶಯವಾದ ಹೆಮ್ಮೆಗೆ ತವರು ಮನೆಯಾಗಿದೆ. ಕುವರಿಯೆ, ನಾನು ಸ್ವತಂತ್ರಳು ಅಲ್ಲ. ತಪಸ್ಸನ್ನು ಹೊರತುಪಡಿಸಿ ಇನ್ನು ಯಾವುದೂ ನನಗೆ ಹೊಂದುತ್ತಿಲ್ಲ... ನಾನು ನಿನ್ನನ್ನು ಆಶೀರ್ವದಿಸುತ್ತೇನೆ. ಅದಷ್ಟೆ ನಾನು ನಿನ್ನ ಕಾರ್ಯಕ್ಕೆ ನೀಡುವ ನೆರವು. ವಿಭೀಷಣ ಕುಮಾರಿಯೆ, ನಲ್ ಆಸೆ ನಿನ್ನದು. ಅದು ನೆರವೇರಲಿ.'

ಎಂದು ಆಶೀರ್ವದಿಸಿದ ಅವನಿಜೆಗೆ ಅನಲೆಯು,

'ದೇವಿ, ನಿರಾಶೆಯನ್ನು ಬಿಡು. ನನ್ನ ತಂದೆಗೆ ನೆನ್ನೆ ವಾರ್ತೆಯನ್ನು ಹಿರಣ್ಯಕೇಶಿಯ ಕೈಲಿ ಕಳುಹಿಸಿದ್ದೇನೆ. ಇಂದ್ರಜಿತುವು ಕೈಗೊಳ್ಳುವ ಯಾಗವು ಮುಗಿಯುವ ಮೊದಲೆ ವಾನರ ಪ್ರಾಜ್ಞ ಸೇನಾನಿಗಳು ವಿಘ್ನವನ್ನು ತಂದೊಡ್ಡುವುದು ನಿಜ.'

ಎಂದು ಮುಗುಳ್ನಗೆಯೊಡನೆ ಹೇಳಿ, ಆ ಧೈರ್ಯವು ತನಗಿರುವದೆಂದು ಸೀತೆಗೆ ಮತ್ತೆ ಹೀಗೆ ತಿಳಿಸಿದಳು:

'ತಾಯಿಯೇ, ದೊಡ್ಡಪ್ಪನು ಇಂದಿಗೆ ಇಲ್ಲಿಗೆ ಬರಲು, ನೀನು ನಮ್ಮೊಂದಿಗೆ ತಾಯಿಯಾಗಿ ನಡೆದುಕೊಳ್ಳುವಂತೆ ನಡೆದುಕೊ. ಕಂದನಿಗೆ ಹಿತದ ಸದ್ಬುದ್ಧಿಯನ್ನು ಹೇಳುವಂತೆ ಹೇಳು. ನಿತ್ಯವೂ ನಿನ್ನನ್ನು ನೆನೆಯುವ ಅವನ ಆತ್ಮಕ್ಕೆ ನಿನ್ನ ಮಹಿಮೆ ಹೊಳೆಯತೊಡಗಿದೆ. ದೇವಿಯೆ, ಮನಸ್ಸು ಮರಗುವಂತೆ; ಹೃದಯ ಕರಗುವಂತೆ; ಅವನ ವೀರ ಹೆಮ್ಮೆ ಕನಿಕರಕ್ಕೆ ಶರಣಾಗುವಂತೆ ಅವನ ಹೃದಯವನ್ನು ಮಿಡಿದು ಹೇಳು! ನನ್ನ ದೊಡ್ಡಪ್ಪನು ಏನೆಂದು ನನಗೆ ಗೊತ್ತು. ದರ್ಪ ಕಾರಣವಾಗಿ ಕಾಠಿಣ್ಯವನ್ನು ತೋರುವನಾದರೂ, ಅವನ ಎದೆಯ ಕಬ್ಬಿಣಕ್ಕೆ ಪ್ರೀತಿಗೆ ಮಣಿಯುವ ಮೃದುತನವಿದೆ.

'ಇದುವರೆಗೆ ನಿನ್ನಂತಹ ಪತಿವ್ರತೆಯರನ್ನು ಕಾಣದಿರುವುದೇ ಅವನ ದುರ್ಗತಿಗೆ ಕಾರಣವಾಯ್ತು. ಇನ್ನು ಆ ಮಹಾತ್ಮನಿಗೆ ಸುಗತಿ ದೂರವಿಲ್ಲ.'

ಎಂದು ದುರಂತವನ್ನು ಲೆಕ್ಕಿಸದೆ, ನಿಜ ನುಡಿಯನ್ನಾಡಿದ ಮುಗ್ಧೆ ಅನಲೆಯ ಮುಡಿಯನ್ನು ಸೀತೆ ನೇವರಿಸಿದಳು. ಹೆಗಲಿನಿಂದ ಇಳಿದು ಎರಡು ಕಡೆ ಜೋತಾಡುತ್ತ ಹದಿನಾರು ವಸಂತಗಳ ಎದೆಯನ್ನು ಶೃಂಗರಿಸಿದ್ದ ನೀಳವಾಗಿ ನುಣುಪಾದ ಕರಿಜಡೆಯನ್ನು ಕೈಗಳಿಂದ ನೇವರಿಸಿದಳು. ರಾವಣನು ಬಂದಾಗ ಹೇಗೆ ತನ್ನ ಆತ್ಮ ಸೂಚಿಸುತ್ತದೆಯೊ ಹಾಗೆ ನಡೆಯುತ್ತೇನೆ ಎಂದು ಭಾಷೆಯಿತ್ತಳು. ದೈತ್ಯ ಕುಲಕನ್ಯೆಯನ್ನು ಹೆತ್ತ ತಾಯಿಯಂತೆ ಪ್ರೀತಿಯಿಂದ ಸಂತೈಸಿದಳು. ದೂರ ಸಮುದ್ರ ತೀರದಿಂದ ಹೊಗೆಯು ಬಾನಿಗೆ ಏರಿ ಮೇಲ್ಮುಖವಾಗಿ ಸಾಗುತ್ತಿತ್ತು!

* * *

ದಶಕಂಠನು ಹತನಾದನೆಂದು ಕೇಳಿದ ಕ್ಷಣದಿಂದ ಸೀತೆಯು ಈಗಲೊ ಆಗಲೊ ರಾಮನೊ, ಲಕ್ಷ್ಮಣನೊ, ದೂತನೊ, ವಿಭೀಷಣನೊ ಯಾರಾದರೂ ಬರುತ್ತಾರೆ. ಪತಿಯ ಆದೇಶವನ್ನು ತರುತ್ತಾರೆ ಎಂದು ಹಗಲು ಇರುಳು ಎಚ್ಚರದಿಂದ ನಿರೀಕ್ಷಿಸುತ್ತಿದ್ದಳು. ಸೀತೆಯನ್ನು ರಾಮನಲ್ಲಿಗೆ ಕರೆದುಕೊಂಡು ಹೋಗಲು ಅನಲೆಯು ತಂದೆ ವಿಭೀಷಣ ಮತ್ತು ಆಂಜನೇಯನೊಡನೆ ಅಶೋಕವನಕ್ಕೆ ಬಂದಳು.

ದುಃಖವನ್ನೆಲ್ಲ ಮರೆತ ಆ ಹುಡುಗಿ ಸುಖ ಉಕ್ಕಿ, ಹರ್ಷಭಾಷ್ಪಗಳೊಡನೆ ಓಡಿಬಂದು ಸೀತೆಯನ್ನು ಅಪ್ಪಿಕೊಂಡಳು. ಪುಳಕಗೊಂಡು ಮೈ ಮರೆತಂತೆ ತೊದಲುತ್ತ ಹೇಳಿದಳು:

'ನನ್ನ ತಂದೆಯು ಶ್ರೀರಾಮ ಸಂದೇಶವನ್ನು ಹೊತ್ತು ಬಂದಿರುವ ಆಂಜನೇಯನನ್ನು ನಿನ್ನ ಸನ್ನಿಧಿಗೆ ಕರೆ ತಂದಿದ್ದಾನೆ. ಅಮ್ಮ, ಅಲ್ಲಿಯೆ ನಿಂತಿದ್ದಾನೆ. ನಿನ್ನ ಸಮಯವನ್ನು ತಿಳಿದು ಬರಲು ನನಗೆ ಹೇಳಿದ್ದಾನೆ.'

'ಮಗಳೆ, ಮಂಗಳದ ವಾರ್ತೆಯನ್ನು ತಂದಿರುವೆ. ಚಿರಸುಖಿಯಾಗು. ನೀನು ಒಲಿದ ವರನೆ ನಿನಗೆ ದೊರೆಯಲಿ! ನಿನ್ನ ಕೈ ಹಿಡಿದವನು ನಿನ್ನ ಕೈ ಬಿಡದಂತೆ ನಡೆದುಕೊಳ್ಳಲಿ. ಪತಿಯ ವಚನವನ್ನು ಕೇಳಲು ಆತುರಳಾದ ಸತಿಗೆ ಸಮಯವೆ? ಹೋಗು, ನಡೆ. ಅಮ್ಮ ಆ ವಂದನೀಯರೀರ್ವರನ್ನು ಬೇಗ ಕರೆದು ತಾ!'

ವಿಭೀಷಣ ಮತ್ತು ಆಂಜನೇಯರು ಪರ್ಣಕುಟಿಗೆ – ಗುಡಿಯನ್ನು ಪ್ರವೇಶಿಸುವ ಭಕ್ತರಂತೆ ಬಾಗಿ ಕೈ ಮುಗಿದು ಬಂದರು. ಸೀತೆಯು ವಿಜಯ ಸುವಾರ್ತೆಯನ್ನು ಕಿವಿ ಸವಿದಿದೆ. ಪ್ರಿಯತಮನ ಪುಣ್ಯ ದರ್ಶನವೆ ಎಲ್ಲ ಪುರಷಾರ್ಥಕ್ಕಿಂತ ಹೆಚ್ಚಿನದು ಎಂದು ಹೇಳಿದಳು. ಆಗ ಆಂಜನೇಯನು ವಿಭೀಷಣನಿಗೆ 'ದನುಜೇಂದ್ರನೇ, ಮೈಥಿಲೀ ಪ್ರಿಯನಿಗೆ ದೇವಿಯ ಅಭಿಲಾಷೆಯನ್ನು ವಿಜ್ಞಾಪಿಸುತ್ತೇನೆ. ನೀನು ಪ್ರಭುವಿನ ಆಜ್ಞೆಯಂತೆ ಲೋಕಮಾನ್ಯೆಗೆ ಮಂಗಳ ಸ್ನಾನ ಮಾಡಿಸಿ, ದಿವ್ಯವಾದ ಅಂಗ ಲೇಪನಗಳಿಂದ, ಆದಿಶೇಷನ ಮೇಲೆ ಪವಡಿಸುವವನ ಪತ್ನಿಗೆ ಒಪ್ಪುವ ರೀತಿಯಲ್ಲಿ ಸುಮಗಂಧದಿಂದ ಶೃಂಗರಿಸಿ ಶೀಘ್ರವಾಗಿ ಕರೆದುಕೊಂಡು ಬಾ'

ಎಂದು ಹೇಳಿ, ಮೈಥಿಲಿಗೆ ಮತ್ತೆ ತಲೆಬಾಗಿ ಕೈ ಮುಗಿದನು. ಪ್ರತಿ ವಂದನೆ ಮಾಡಿದ ಪೂಜ್ಯೆಯಿಂದ ಬೀಳ್ಕೊಟ್ಟನು. ಅನಿಲಾತ್ಮಜನು ಅಯೋನಿಜೆಯ ಹೃದಯದಾಸೆಯನ್ನು ಹೊತ್ತು ಹೋಗಿ ರಘುರಾಮನಿಗೆ ತಿಳಿಸಿದನು. ಕಪಿರಾಜ ಸುಗ್ರೀವನು ವಾನರ ಕಲಾಭಿರುಚಿ ಸಾರ್ಥಕವಾಗಿ ಪ್ರಕಟವಾಗುವಂತೆ ಹೂ ತಳಿರು ತೋರಣಗಳಿಂದ ವನರಂಗವನ್ನು ಅಣಿಗೊಳಿಸಿದನು. ವಿಬೀಷಣನು ರಾಮನ ಸೂಚನೆಯಂತೆ ವೈದೇಹಿಯೊಬ್ಬಳನ್ನೆ ಅವನ ಬಳಿಗೆ ಕಳುಹಿಸಲು ತೀರ್ಮಾನಿಸಿದನು. ಆಗ ಅನಲೆಯು ತಂದೆಗೆ 'ನಾನು ಆರ್ಯಳ ಜೊತೆ ಹೋದರೆ ಪೂಜ್ಯನಿಗೇನು ತೊಂದರೆ?' ಎಂದು ಪ್ರಶ್ನಿಸಿದಳು. ಅವನು ಅಂದಿನ ಗಂಭೀರ ಪರಿಸ್ಥಿತಿಯನ್ನು ಮಗಳಿಗೆ ತಿಳಿಸಿದನು. ಸೀತೆ ಪಲ್ಲಕ್ಕಿಯಿಂದ ಇಳಿದು ರಾಮನಲ್ಲಿಗೆ ನಡೆದು ಹೋದಳು.

ಲೋಕ ವಿಖ್ಯಾತೆ ಸೀತೆಯನ್ನು ನೋಡಿ ವಾನರ ಸೈನ್ಯವು ಕಣ್ಣು ತುಂಬಿಕೊಂಡಿತು. ಹೃದಯ ತುಂಬಿ ಬರಲು ಜನ್ಮ ಸಾರ್ಥಕವಾಯಿತೆಂದುಕೊಂಡಿತು. ಬಾಯ್ಬಿಟ್ಟು ಹರ್ಷ ವ್ಯಕ್ತಪಡಿಸಿ ಹಿಗ್ಗಿತು. ದಾಶರಥಿಯು ಸ್ನಾನ ಮಾಡಿ ಉಟ್ಟುತೊಟ್ಟು ಅಲಂಕರಣಗೊಂಡಿದ್ದ ಮಡದಿಯನ್ನು ಉಪೇಕ್ಷೆಯಿಂದ ಕಡೆಗಣ್ಣಿನಲ್ಲಿ ನೋಡಿದನು; ಮಾತನಾಡಿಸಲಿಲ್ಲ. ಅವನ ಪ್ರೀತಿರಹಿತ ನಡೆಕಂಡು ಹನುಮ, ಜಾಂಬವಂತ, ಲಕ್ಷ್ಮಣಾದಿಗಳು ಭೀತರಾದರು. ಪಕ್ಕದಲ್ಲಿ ನಿಂತಿದ್ದ ಸತಿಯನ್ನು ಧಿಕ್ಕರಿಸಿ, ಕ್ರೂರ ನುಡಿಗಳಿಂದ ನಿಂದಿಸಿ 'ಮೂರ್ಖಳೆ ನೀನು ಎಲ್ಲಿಗಾದರೂ ಹೋಗು. ನನ್ನ ಕಣ್ಮುಂದೆ ನಿಲ್ಲಬೇಡ.' ಎಂದು ಹೇಳಿದನು.

ರಾಜರ್ಷಿ ಜನಕ ಸುತೆಯು ಪತಿಯ ವಾಕ್ಕಿನ ಶೂಲದ ಒರಟು ತಿವಿತದಿಂದಲು, ಬಡಿಗೆಯಿಂದ ಬಡಿದಂತಹ ನೋವಿನಿಂದಲು ನಾಚಿ ಬಾಗಿದಳು. ಸುಮ್ಮನೆ ನಿಂತಳು. ತನ್ನ ಮುಂದಿನ ದಾರಿಯನ್ನು ನಿಶ್ಚಯಿಸಿದಳು. ತಾನು ನಿರಪರಾಧಿ ಎಂಬುದನ್ನು ಸ್ಪಷ್ಟವಾಗಿ ತಿಳಿಸಿದಳು. ಸೌಮಿತ್ರಿಗೆ ಚಿತೆಯನ್ನು ರಚಿಸಲು ಕೇಳಿಕೊಂಡಳು.

ಪುಣ್ಯಾತ್ಮಳು, ನಿಸ್ಸಂಗ ಅಂತರಾತ್ಮಳು, ರಾಜರ್ಷಿಸುತೆಯು ಆದ ಸೀತೆಯು ಪತಿದೇವರ ಪೂಜೆ ಮಾಡಿ, ಕಂಡವರೆಲ್ಲ ಬೆರಗಾಗುವಂತೆ ನಸುನಗುತ್ತ ಚಿತೆಯೆಡೆಗೆ ನಡೆದಳು. ಅಗ್ನಿಯನ್ನುದ್ದೇಶಿಸಿ ಹೀಗೆ ಹೇಳಿದಳು:

'ಓ ಅಗ್ನಿ, ನೀನು ಲೋಕಸಾಕ್ಷಿ. ನಡೆನುಡಿಗಳಲ್ಲಿ, ಚಿತ್ತದಲ್ಲಿ ರಾಘವೇಂದ್ರನನ್ನು ಹೊರತುಪಡಿಸಿ ಬೇರೆಯ ಕಡೆಗೆ ನನ್ನ ಪ್ರಾಣದ ಉಸಿರು ಹರಿದಿದ್ದರೆ ನನ್ನನ್ನು ಆಹುತಿ ತೆಗೆದುಕೊ. ಇದಕ್ಕೆ ಸೂರ್ಯ, ಚಂದ್ರ, ಸಂಧ್ಯೆ, ರಾತ್ರಿ, ಪೃಥ್ವಿ ಸಾಕ್ಷಿಯಿರಲಿ. ಪುರುಷೋತ್ತಮನಾದ ನನ್ನ ಪತಿಯ ಪಾದಪದ್ಮಗಳಲ್ಲಿ ನಾನು ಸದಾ ನೆಲೆಸಿರುವೆನಾದರೆ, ಓ ಅನಿಲಮಿತ್ರನೆ, ನಿನ್ನ ಈ ಮಗಳನ್ನು ಪತಿಚರಣ ಸೇವಾರ್ಥಕ್ಕಾಗಿ ಕಾಪಾಡು, ಕಾಪಾಡು, ಕಾಪಾಡು.'

ಪುಟವಿಟ್ಟ ಚಿನ್ನದಂತಹ ಕಾಂತಿಯುಳ್ಳ ಪೂಜ್ಯೆಯು ಧಗಧಗಿಸುವ ಉಜ್ವಲ ಚಿತಾಗ್ನಿಯನ್ನು ಮಂಗಳವಾದ ಹವಿಸ್ಸಿನಂತೆ ಮುಗಿದ ಕೈ ಮುಗಿದಂತೆ ಪ್ರವೇಶಿಸಿದಳು. ಓ ಓ ಓ ಯೆಂದು ಅಲ್ಲಿ ನೆರದಿದ್ದವರ ರೋದನವು ಹರಿದು ದಿಗಂತವನ್ನು ವ್ಯಾಪಿಸಿತು.

ನಿಷ್ಠುರ ಶಿಲಾಮೂರ್ತಿಯಂತೆ ರೆಪ್ಪೆಗಳನ್ನು ಮಿಟುಕಿಸದೆ ನಿಂತು ಎಲ್ಲವನ್ನು ಸಾಕ್ಷಿಯಂತೆ ನೋಡುತ್ತಿದ್ದ ರಾಮನ ಮುಖವು ತೇಜಸ್ಸಿನಿಂದ ಪ್ರಕಾಶಮಾನವಾಯಿತು. ನೋಡುವವರ ವಿಸ್ಮಯವು ಚಿಂತೆಗೆ ತಿರುಗುವಂತೆ ಜನರು ಓವೊವೋ ಎನ್ನುವಷ್ಟರಲ್ಲಿ ಚಿತೆಯತ್ತ ಚಲಿಸಿದನು. ಪರಶುರಾಮನನ್ನು ಜಯಿಸಿದ ಶ್ರೀರಾಮಚಂದ್ರನು ಗೋಪುರ ಗೋಪುರವಾಗಿ ಹೊಮ್ಮಿ ಪ್ರಜ್ವಲಿಸುತ್ತಿದ್ದ ಅಗ್ನಿಯ ಮಧ್ಯಕ್ಕೆ ಪ್ರವೇಶಿಸಿ ಮರೆಯಾದನು!

ಅಲ್ಲಿ ನೆರೆದಿದ್ದ ಎಲ್ಲರ ಇಂದ್ರಿಯಗಳಿಗೆ ಸೂಕ್ಷ್ಮವಾದ, ಪರೋಕ್ಷವಾದ ಅತೀಂದ್ರಿಯವು ತನ್ನ ಹೆಬ್ಬಾಗಿಲನ್ನು ತೆರೆದಂತೆ ಆಯಿತು. ಅಸಂಖ್ಯ ದೇವತೆಗಳ ಕಂಠಸ್ವನವು ಸಹಸ್ರ ತಂತಿಗಳ ವೀಣಾ ಧ್ವನಿಯಂತೆ ಕೇಳಿಬಂದಿತು. ಅದು ಆಗಸವೇ ತುಂಬಿಯಾದ ಅಶರೀರ ಮಧುರವಾಣಿಯಾಗಿತ್ತು. ಅದನ್ನು ವಾನರ ಮತ್ತು ರಾಕ್ಷಸ ಸಮೂಹವು ಮೂಕವಾಗಿ ಮೌನದಿಂದ ಆಲಿಸಿತು. ನಯನೇಂದ್ರಿಯವು ತಾನು ಅದುವರೆಗೆ ಕಾಣದ ಅಚ್ಚರಿಯ ವರ್ಣಗಳನ್ನು ಕಂಡಿತು. ಶ್ರೀ ದೇವವಾಣಿಗಳು ಭೂಮಿಯದಲ್ಲದ ದಿವ್ಯ ಭಾಷೆಯಲ್ಲಿ, ಮಹಾಛಂದಸ್ಸಿನಲ್ಲಿ ಸ್ತೋತ್ರಗಳನ್ನು ಹಾಡಿದವು.

'ಓಂ ನಮೋ ಸಚ್ಚಿದಾನಂದನೆ ನಮೋ ನಮೋ!
ಓಂ ನಮೋ ಸರ್ವಸ್ವತಂತ್ರನೆ ನಮೋ ನಮೋ!'

ಚಿತಾಗ್ನಿಯ ಉರಿಯು ನವರತ್ನಗಳ ಕಾಂತಿಯನ್ನು ಹೊಂದಿತು! ವೈಶ್ವಾನರನು ಬೀಸುವ ಅಗ್ನಿ ಚಾಮರದಂತೆ ಬೃಹತ್ ಜ್ವಾಲೆಗಳು ಅತ್ತಲಿತ್ತ ತೊನೆದಾಡಿದವು. ಅದು ಆದಿಶೇಷನೆ ವೇಷಾಂತರಗೊಂಡು ಸೇವೆ ಮಾಡಲು ಬಂದ ಹಾಗೆ ಕಾಣುತ್ತಿತ್ತು!

ದಶರಥ ಪುತ್ರನು ಜಾನಕಿಯ ಕೈ ಹಿಡಿದುಕೊಂಡು ಅಗ್ನಿದೇವನ ಪವಿತ್ರ ಶರೀರದಿಂದ ಹೊರಹೊಮ್ಮಿದನು! ಪಾವನ ಅಗ್ನಿಯಲ್ಲಿ ಸ್ನಾನ ಮಾಡಿದ ಸೀತೆಯನ್ನು ಕಿಚ್ಚಿನ ಉರಿಯಿಂದ ಕಾಯುವ ರೀತಿಯಲ್ಲಿ ನಿಧಾನವಾಗಿ ಹೊರಗೆ ಕರೆ ತಂದನು. ಅವರು ಪವಿತ್ರವಾದ ಗಿರಿಯ ಶಾಂತವೂ ಹದವೂ ಆದ ಎಳೆಯ ಹಸಿರು ಹುಲ್ಲಿನ ಮನೋಹರ ವೇದಿಕೆಯನ್ನು ಏರಿದರು.

ಶ್ರೀಮದ್ ದಿವ್ಯದೇಹದಿಂದ, ದಿವ್ಯ ಮಂಗಳಕರವಾದ ಮಾಲೆ ವಸ್ತ್ರಾಭರಣಗಳಿಂದ ಅಲಂಕೃತರಾಗಿ ದಿವ್ಯ ತೇಜಸ್ಸಿನಿಂದ ಶೋಭಿಸುತ್ತಿದ್ದ ಸೀತಾಸಹಿತ ರಾಮನನ್ನು ಕಂಡು ಕಪಿಸೈನ್ಯವು ಹರ್ಷೋನ್ಮಾದಕ್ಕೊಳಗಾಯಿತು. ಘೇ ಘೇ ಎಂದು ಘೋಷಿಸುತ್ತಿದ್ದ ರಾಕ್ಷಸ ಸೈನ್ಯದ ಜಯಧ್ವನಿಯ ಜೊತೆ ಅದು ಕೂಡಿದ್ದು – ಸಮುದ್ರ ಜಲವು ಮೋಡದಲ್ಲಿ ಒಂದಾದಂತಿತ್ತು!

ಅನಲೆಯು ಓಡೋಡಿ ಬಂದು ರಾಮಚಂದ್ರನ ಪಾದಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿದಳು. ಸಂತೋಷ ಮೂರ್ಛಿತಳಾದಂತೆ ನುಡಿದಳು:

'ಸ್ವಾಮಿಯೇ ಕ್ಷಮಿಸು. ದೇವಿಯನ್ನು ನಿಂದಿಸಿದ ನಿನ್ನನ್ನು ನಾನು ಎಷ್ಟೊ ಬಯ್ದೆನು. 'ಪತಿವ್ರತೆಯನ್ನು ಅಗ್ನಿಪ್ರವೇಶ ಮಾಡಿಸುವುದಿರಲಿ, ತನ್ನನ್ನೆ ಪರೀಕ್ಷಿಸಿಕೊಳ್ಳುವವರಾರು? ಪಾಪದೋಷದಿಂದ ತಾವೇನು ಹೊರತೆ?' ಎಂದು ಶಂಕಿಸಿದೆನು. ಆ ನಿಂದನೆ ಭಸ್ಮವಾಯಿತು.

'ತಂದೆಯೆ, ನೀನು ಒಡ್ಡಿದ ಚಿತೆಯ ಲೋಕ ಪಾವಕ ಪವನ ಸಖನಿಂದ ಪೂಜ್ಯೆಯನ್ನು ಪಾಲಿಸುವ ನೆವದಿಂದ ನೀನು ನಿನ್ನನ್ನು ಪರೀಕ್ಷೆಗೆ ಒಳಪಡಿಸಿಕೊಂಡೆ! ಸರ್ವಲೋಕ ಪ್ರಭುವೆ, ಲೋಕ ತೃಪ್ತಿಗೆ ಲೋಕ ಮರ್ಯಾದೆಗೆ ಒಳಗಾದ ನೀನು ನಿಜವಾಗಿ ಲೋಕಗುರು!'

ವಿಭೀಷಣ ಕುಮಾರಿಯ ನುಡಿಯೆ ಜನರಿಗೆ ತಮ್ಮ ತಮ್ಮ ಹೃದಯದ ಅಂತರ್ ಬೋಧೆಯಾಯಿತು.



# ಲೇಖಕರ ಕೃತಿಗಳು

1. ಹಾಡುಹಕ್ಕಿ ಅಂಬಿಕಾತನಯದತ್ತ (1995)
(ಮೂರನೇ ಆವೃತ್ತಿ–2012)
2. ಡಿ.ಆರ್. ಬೇಂದ್ರೆ (1997)
(ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಆಂಗ್ಲಕೃತಿ)
3. ನಾಕುತಂತಿ – ಒಂದು ಟಿಪ್ಪಣಿ (2000)
(ಮೂರನೇ ಆವೃತ್ತಿ – 2012)
4. ರಸ್ತೆ ನಿಯಮಗಳು (2000)
(ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಕೃತಿ) ಆರನೇ ಆವೃತ್ತಿ–2020
5. ಹೂತ್ಕದ ಹುಣಸಿ (2000) (ದ.ರಾ. ಬೇಂದ್ರೆ ಕಾವ್ಯ ವಿಮರ್ಶೆ)
(ಎರಡನೇ ಆವೃತ್ತಿ – 2011)
6. ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ – ಒಂದು ಅಧ್ಯಯನ (2001)
(ಪಿ.ಎಚ್.ಡಿ. ಮಹಾಪ್ರಬಂಧ) ಎರಡನೇ ಆವೃತ್ತಿ 2012
7. ಬರೆಹದಲ್ಲಿ ಬೇಂದ್ರೆಯವರ ಬದುಕು (2008)
(ದ.ರಾ ಬೇಂದ್ರೆ ರಾಷ್ಟ್ರೀಯ ಟ್ರಸ್ಟ್, ಧಾರವಾಡ ಪ್ರಕಟಿಸಿರುವ ಕೃತಿ)
8. ಅಂತರಂಗದತ್ತ ನಯನ (2010)
9. ಮಹಾಕವಿ ಲಕ್ಷ್ಮೀಶನ ವಚನ ಜೈಮಿನಿ ಭಾರತ (2012)
10. ಹರಿಹರ ಮಹಾಕವಿಯ ವಚನ ಗಿರಿಜಾಕಲ್ಯಾಣ (2013)
11. ಬೇಂದ್ರೆಯವರ ಸಾಹಿತ್ಯದಲ್ಲಿ ಶರಣ ಚಿಂತನೆ (2015)
12. ತಿರುತಿರುಗಿಯು ಹೊಸತಾಗಿರಿ (2015)
(ದ.ರಾ. ಬೇಂದ್ರೆಯವರ ನಾದಲೀಲೆಯ ಅಧ್ಯಯನ)
13. ರಾಘವಾಂಕ ಮಹಾಕವಿಯ ವಚನ ಹರಿಶ್ಚಂದ್ರ ಚಾರಿತ್ರ (2016)
14. ಸಂತಕವಿ ಕನಕದಾಸರ ನಳದಮಯಂತಿ ಪ್ರೇಮಕಥೆ (2018)
15. ಬೇಂದ್ರೆಕಾವ್ಯ (2018) ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ.
16. ಬೇಂದ್ರೆಕಾವ್ಯ : ಪದನಿರುಕ್ತ (2018)
17. ಹಸಿರು ಹಚ್ಚಿ ಚುಚ್ಚಿ – (2019)
18. ಕುವೆಂಪು ಹನುಮದ್ದರ್ಶನ (2020)



ಎಲ್ಲ ಮಹತ್ವದ ಪ್ರಾಚೀನ ಪಠ್ಯಗಳೂ ಕಾಲ ಸರಿದಂತೆ ಸೂತಕಗೊಳ್ಳುತ್ತವೆ, ಮತ್ತಾವುದೋ ಉದ್ದೇಶ, ಹಿತಾಸಕ್ತಿಗಳಿಗೆ ಎರವಾಗುತ್ತಾ ಹೋಗುತ್ತವೆ. ಹಾಗೆಂದು ಅಂತಹ ಪಠ್ಯಗಳನ್ನು ವಿಸರ್ಜಿಸಲಾಗದು. ಅದು ಪ್ರತಿ ಯುಗಧರ್ಮದಲ್ಲೂ ತತ್ಕಾಲೀನ ಮೌಲ್ಯಗಳಿಗೆ ಅನುಗುಣವಾಗಿ ಹೊಸ ಅವತಾರ ಪಡೆಯುತ್ತಿರುತ್ತದೆ. 'ಶ್ರೀರಾಮಾಯಣ ದರ್ಶನಂ' ನಮ್ಮ ಯುಗಕ್ಕೆ ಪ್ರಾಪ್ತಿಯಾಗಿರುವ ಅಂತಹ ಒಂದು ಭಾಗ್ಯವಾಗಿದೆ. ಇದರ ಕೆಲವು ಮಹತ್ವದ ಪಾತ್ರಗಳು ಈ ಕೃತಿಯಲ್ಲಿ ತಿಳಿಗನ್ನಡ ರೂಪದಲ್ಲಿ ಸಿಗುತ್ತಿರುವುದು ಹೊಸಕಾಲದ ಓದುಗರ ಸೌಭಾಗ್ಯವಾಗಿದೆ.

ಕುವೆಂಪು ಅವರ ಎರಡು ಮಹಾಕಾದಂಬರಿಗಳಲ್ಲಿ ಮಲೆನಾಡ ಬದುಕಿನ ವಿರಾಟ್ ದರ್ಶನವಾದರೆ, 'ಮಲೆನಾಡಿನ ಚಿತ್ರಗಳು' ಕಿರುಹೊತ್ತಗೆಯಲ್ಲಿ ಆ ವಿಸ್ತಾರ ಬದುಕಿನ ಒಂದು ಕಿರುನೋಟ ಓದುಗನಿಗೆ ಲಭಿಸುತ್ತದೆ. ಆ ಕಿರುನೋಟವೇ ಅವರ ಮಹತ್ಕಾದಂಬರಿಗಳೊಳಗೆ ಪ್ರವೇಶಿಸಲು ಸಹೃದಯನನ್ನು ಪ್ರೇರೇಪಿಸುತ್ತದೆ. ಅಂತೆಯೇ ಡಾ. ಜಿ.ಕೃಷ್ಣಪ್ಪನವರ ಒಂಬತ್ತು ಪಾತ್ರಗಳನ್ನು ಒಳಗೊಂಡ 'ಶ್ರೀರಾಮಾಯಣ ದರ್ಶನಂ ಪಾತ್ರಗಳ ಕಥಾವಳಿ'ಯು ಮಹಾಕಾವ್ಯದ ಒಂದು ಇಣುಕು ನೋಟವನ್ನು ಮತ್ತು ಮಹಾಕಾವ್ಯವನ್ನೋದುವ ಒಂದು ಪ್ರೇರಣೆಯನ್ನು ಓದುಗನಿಗೆ ನೀಡುತ್ತದೆ.

**ಟಿ.ಎನ್. ವಾಸುದೇವಮೂರ್ತಿ**




**ವಂಶಿ ಪಬ್ಲಿಕೇಷನ್ಸ್**
ನೆಲಮಂಗಲ, ಬೆಂಗಳೂರು-562 123
ಮೊಬೈಲ್ : 99165 95916
ಇ-ಮೇಲ್: vamshipublications@gmail.com

